# ಇತಿಹಾಸ ಪಾಠಗಳು

## ಭಾಗ - 1

ಡಾ. ಮೌ। ಅಫ್ಝಲ್ ಹುಸೈನ್

ಪರಮ ದಯಾಮಯನೂ ಕರುಣಾನಿಧಿಯೂ ಆದ ಅಲ್ಲಾಹನ ನಾಮದಿಂದ

# ಪ್ರಕಾಶಕರ ಮಾತು

**ಗ**ತಿಸಿಹೋದ ಕಾಲವನ್ನು ಇತಿಹಾಸವೆನ್ನುತ್ತಾರೆ. ಇತಿಹಾಸವು ಮಾನವನ ಸ್ಮರಣೆಗಾಗಿರುವ ದಾಖಲೆಯಾಗಿದೆ. ಮಾನವನು ಅನಾದಿಕಾಲದಿಂದಲೂ ಇತಿಹಾಸದ ಘಟನೆಗಳನ್ನು ಒಂದಲ್ಲ ಒಂದು ರೀತಿಯಲ್ಲಿ ರಕ್ಷಿಸುತ್ತಾ ಬಂದಿದ್ದಾನೆ. ಹಿಂದಿನ ಕಾಲದಲ್ಲಿ ಅವು ಬಾಯ್ದೆರೆಯಾಗಿ ಪೀಳಿಗೆಯಿಂದ ಪೀಳಿಗೆಗೆ ವರ್ಗಾಯಿಸಲ್ಪಡುತ್ತಿತ್ತು. ಮಾನವನಿಗೆ ಅಕ್ಷರ ಜ್ಞಾನವಿಲ್ಲದಿರುವುದೇ ಅದಕ್ಕೆ ಕಾರಣವಾಗಿತ್ತು. ಆದುದರಿಂದ ಒಂದು ಘಟನೆಯು ಪೀಳಿಗೆಯಿಂದ ಪೀಳಿಗೆಗೆ ತಲಪುವಾಗ ಅನೇಕ ರೀತಿಯ ಲೋಪದೋಷಗಳು, ದೌರ್ಬಲ್ಯಗಳು, ಊಹಾಪೋಹಗಳು ಹಾಗೆಯೇ ಮಾನವನ ವೈಯಕ್ತಿಕ ಸ್ವಾರ್ಥಭಾವನೆಗಳು ಅದರಲ್ಲಿ ಸೇರ್ಪಡೆಗೊಂಡು ಇತಿಹಾಸವು ತನ್ನ ನೈಜ ಸ್ವರೂಪವನ್ನು ಕಳೆದುಕೊಳ್ಳುತ್ತಿತ್ತು.

ಜ್ಞಾನ-ವಿಜ್ಞಾನದಲ್ಲಿ ಮಾನವನು ಮುಂದುವರಿದಂತೆ ಇತಿಹಾಸವನ್ನು ಬರಹ ಮೂಲಕ ದಾಖಲಿಸುವ ಪ್ರಕ್ರಿಯೆ ಆರಂಭಗೊಂಡಿತು. ಪ್ರವಾದಿ ಮುಹಮ್ಮದ್ ರವರ(ಸ) ಆಗಮನದೊಂದಿಗೆ ಲೋಕವು ಹೊಸ ಯುಗವನ್ನು ಪ್ರವೇಶಿಸಿತು. ಸಾಹಿತ್ಯಕ್ಕೆ ಎಲ್ಲಿಲ್ಲದ ಮಹತ್ವ ಬಂತು. ಜನರಲ್ಲಿ ಓದು ಬರಹದ ಅಭಿರುಚಿಯೂ ಕಲಿಕೆಯ ಆಸಕ್ತಿಯೂ ಮೂಡಿತು. ಇದೇ ಕಾರಣದಿಂದಾಗಿ ಮುಸ್ಲಿಮರು ಜೀವನದ ಸಕಲ ರಂಗಗಳಲ್ಲಿ ಸಾಧನೆಗೈದಂತೆ ಇತಿಹಾಸವನ್ನು ಯಥಾವತ್ತಾಗಿ ದಾಖಲಿಸುವ ನಿಟ್ಟಿನಲ್ಲೂ ಪ್ರಾಮಾಣಿಕ ಸೇವೆಗೈದರು. ಆದುದರಿಂದ ಮುಸ್ಲಿಮ್ ಇತಿಹಾಸವು ಸ್ಫಟಿಕದಂತೆ ಸ್ಪಷ್ಟವಾಗಿ ಲೋಕದ ಮುಂದೆ ಬರುವಂತಾಯಿತು.

'ಇತಿಹಾಸ ಪಾಠಗಳು' ಎಂಬ ಈ ಪುಸ್ತಕದಲ್ಲಿ ಭಾರತೀಯ ಮುಸ್ಲಿಮ್ ಇತಿಹಾಸವನ್ನು ಸಂಕ್ಷಿಪ್ತವಾಗಿ ಕ್ರೋಢೀಕರಿಸಲಾಗಿದೆ. ಇಲ್ಲಿನ ಮುಸ್ಲಿಮ್ ಆಡಳಿತಗಾರರ ಹಾಗೂ ಇಸ್ಲಾಮಿನ ಪ್ರಚಾರ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದ ಸೂಫೀಸಂತರ ಬಗ್ಗೆ ವಿದ್ಯಾರ್ಥಿ ವಿದ್ಯಾರ್ಥಿನಿಯರಿಗೆ ಪ್ರಾಥಮಿಕ ಜ್ಞಾನ ನೀಡುವುದೇ ಇದರ ಉದ್ದೇಶವಾಗಿದೆ. ಇದು ಇಸ್ಲಾಮಿನ ಸಮಗ್ರ ಅಧ್ಯಯನಕ್ಕೆ ಪ್ರೇರಕವಾಗಬಹುದೆಂದು ನಿರೀಕ್ಷಿಸುತ್ತೇವೆ.

ಶಾಂತಿ ಪ್ರಕಾಶನ

# ಅನುಕ್ರಮಣಿಕೆ

## ಪ್ರಸ್ತಾವನೆ

'ಇತಿಹಾಸ ಪಾಠಗಳು' ಎಂಬ ಈ ಪುಸ್ತಕದಲ್ಲಿ ಭಾರತದ ಮುಸ್ಲಿಮ್ ಇತಿಹಾಸವನ್ನು ಸಂಕ್ಷಿಪ್ತವಾಗಿ ಕೊಡಲಾಗಿದೆ. ಈ ದೇಶದ ನೈಜ ಒಡೆಯನಾದ ಅಲ್ಲಾಹನು ವಿವಿಧ ಭಾಗಗಳಲ್ಲಿ ವಿವಿಧ ಜನರು ಜೀವನ ಸಾಗಿಸಲು ಅವಕಾಶ ನೀಡಿದನು. ಪ್ರಪ್ರಥಮವಾಗಿ ಈ ದೇಶದ ವಾರೀಸು ಇಲ್ಲಿನ ಮೂಲನಿವಾಸಿಗಳದ್ದಾಗಿತ್ತು. ಅವರು ಅನೇಕ ಕಾಲದ ವರೆಗೆ ಈ ದೇಶದ ಸಂಪತ್ತು, ಸಲಕರಣೆಗಳ ಪ್ರಯೋಜನ ಪಡೆಯುತ್ತಾ ಬಂದರು. ತಮ್ಮ ಶಕ್ತಿ ಸಾಮರ್ಥ್ಯಗಳನ್ನು ಈ ದೇಶದ ಅಭಿವೃದ್ಧಿಗಾಗಿ ತೊಡಗಿಸಿ ಕೊಂಡರು. ಆ ಮೂಲಕ ದೇವನ ಅನೇಕ ದಾಸರು ಪ್ರಯೋಜನ ಪಡೆಯುವಂತಾಯಿತು. ಕಾಲ ಮುಂದುವರಿದಂತೆ ಅವರ ನಂತರದವರು ಅಧಿಕಾರಕ್ಕೇರಿದರು, ಆದರೆ ಅವರು ಹಿಂದಿನವರಂತೆ ಸಮರ್ಥರಾಗಿರಲಿಲ್ಲ. ಅವರನ್ನು ತಮ್ಮ ಸಮಕಾಲೀನರಾದ ಇತರ ಜನಾಂಗದೊಡನೆ ಹೋಲಿಸಿದಾಗ ಚಾರಿತ್ರ್ಯ, ಶಿಕ್ಷಣ, ಶಕ್ತಿ, ಸಾಮರ್ಥ್ಯಗಳಲ್ಲಿ ಅವರು ತುಂಬಾ ಹಿಂದಿದ್ದರು. ಅವರಲ್ಲಿ ಇನ್ನು ಯಾವುದೇ ನಿರ್ಮಾಣ ಕಾರ್ಯ ನಿರೀಕ್ಷಿಸಲ ಸಾಧ್ಯವಾದಾಗ ಅಲ್ಲಾಹನು ಅವರ ಅವಧಿಯನ್ನು ಕೊನೆಗೊಳಿಸಿ ಹೊರಗಿನವರನ್ನು ಇಲ್ಲಿ ನೆಲೆಗೊಳಿಸಿದನು. ಅವರು ತುಲನಾತ್ಮಕವಾಗಿ ಎಲ್ಲ ರೀತಿಯಲ್ಲೂ ಹಿಂದಿನವರಿಗಿಂತ ಉತ್ತಮರಾಗಿದ್ದರು.

# ಅಧ್ಯಾಯ - 1

## ದ್ರಾವಿಡರು

ಹೊರಗಿನಿಂದ ಬಂದವರಲ್ಲಿ ದ್ರಾವಿಡರು ಪ್ರಮುಖರಾಗಿದ್ದರು. ಅವರು ದೇಶದ ಅನೇಕ ಭಾಗಗಳಲ್ಲಿ ಚದುರಿದರು. ಇಲ್ಲಿನ ಸಂಪನ್ಮೂಲಗಳನ್ನು ವಶಪಡಿಸಿಕೊಂಡರು ಮತ್ತು ಒಂದು ಬಲಿಷ್ಠ ನಾಗರಿಕತೆಗೆ ನಾಂದಿ ಹಾಕಿದರು. ಅದಕ್ಕೆ ಹರಪ್ಪಾ, ಮೊಹೆಂಜದಾರೊ ಮತ್ತು ಉತ್ತರ ಭಾರತದ ಕೆಲವು ಪ್ರದೇಶಗಳ ಕುರುಹುಗಳು ಇಂದಿಗೂ ಸಾಕ್ಷಿಯಾಗಿದೆ. ದ್ರಾವಿಡರು ಅನೇಕ ಕಾಲದ ವರೆಗೆ ಇಲ್ಲಿ ಆಡಳಿತ ನಡೆಸಿದರು. ಅಲ್ಲಾಹನು ತನ್ನ ಅಪಾರ ಅನುಗ್ರಹವನ್ನು ಅವರ ಮೇಲೆ ಸುರಿಸಿದ್ದನು. ಆದರೆ ಮೆಲ್ಲಮೆಲ್ಲನೆ ಅವರ ನಂತರದವರು ಸುಖಲೋಲುಪ ಜೀವನದಲ್ಲಿ ಮೈಮರೆತರು ಮತ್ತು ಅಲ್ಲಾಹನ ಅನುಗ್ರಹಗಳನ್ನು ಮರೆತರು. ಅವರು ಅಲ್ಲಾಹನ ಜೊತೆ ಇತರ ಅನೇಕ ದೇವಿದೇವತೆಗಳನ್ನು ಪೂಜಿಸತೊಡಗಿದರು. ಸ್ವಜನ ಪಕ್ಷಪಾತವು ಅಕ್ರಮ ಅನ್ಯಾಯಗಳಿಗೆ ಪ್ರೇರೇಪಿಸಿತು. ದೇವಿದೇವತೆಗಳಿಗೆ ಮಾನವ ರಕ್ತ ಅರ್ಪಿಸುವುದೂ ನಡೆಯಲಾರಂಭಿಸಿತು. ಬಡವರು ಮತ್ತು ಅಸಹಾಯಕರ ಮೇಲೆ ಅನ್ಯಾಯವೆಸಗ ತೊಡಗಿದರು. ಅವರ ನಿರ್ಮಾಣ ಕಾರ್ಯಕ್ಕಿಂತ ಸಂಹಾರವೇ ಹೆಚ್ಚಾಯಿತು. ಒಟ್ಟಿನಲ್ಲಿ ಅಲ್ಲಾಹನ ಈ ಭೂಮಿಯು ಕ್ಷೋಭೆ ಮತ್ತು ಅಶಾಂತಿಯಿಂದ ತುಂಬಿತು. ಪರಿಣಾಮ ವೆಂಬಂತೆ ಅಲ್ಲಾಹನ ಕೋಪ ಅವರ ಮೇಲಾಯಿತು. ಆದುದರಿಂದ ಆತನು 'ಆರ್ಯ'ರೆಂಬ ಹೊಸ ಜನಾಂಗವನ್ನು ಇವರ ಮೇಲೆ ಹೇರಿ ಬಿಟ್ಟನು. ಅವರು ದ್ರಾವಿಡರಿಂದ ಅಧಿಕಾರ ಕಿತ್ತುಕೊಂಡರು. ಅವರ ಅರಮನೆ-ಕೋಟೆಕೊತ್ತಳಗಳನ್ನು ಸ್ವಾಧೀನಪಡಿಸಿಕೊಂಡರು. ಅನೇಕರು ಓಡಿಹೋಗಿ ಕಾಡಿನಲ್ಲಿ ಅಭಯ ಪಡೆದರು. ಇನ್ನು ಅನೇಕರನ್ನು ನೌಕರಿಗೆ ಮತ್ತು ಗುಲಾಮಗಿರಿಗೆ ತಳ್ಳಲಾಯಿತು. ಅಕ್ರಮಿ ಮತ್ತು ಅವಿಧೇಯ ಜನರ ಅಂತಿಮ ಪರಿಣಾಮ ಇದುವೇ ಆಗಿದೆ.

## ಆರ್ಯರು

ಆರ್ಯರದು ಒಂದು ಉತ್ತಮ ವರ್ಗವಾಗಿತ್ತು. ಅವರು ಧೈರ್ಯಶಾಲಿಗಳಾಗಿದ್ದರು. ಅವರ ಶಕ್ತಿ ಸಾಮರ್ಥ್ಯಕ್ಕೆ ಹೋಲಿಸಿದಲ್ಲಿ, ಅವರ ಸಮಕಾಲೀನರಲ್ಲಿ ಯಾರೂ ಅವರಷ್ಟು ಮುಂದುವರಿದಿರಲಿಲ್ಲ. ಆದುದರಿಂದ ಅಲ್ಲಾಹನು ಅವರಿಗೆ ಈ ದೇಶವನ್ನಾಳುವ ಅವಕಾಶ ಕಲ್ಪಿಸಿದನು. ಅವರು ತಮ್ಮ ಯುಕ್ತಿ-ಶಕ್ತಿಯನ್ನು ಬಳಸಿ

ತಮ್ಮನ್ನು ಜನಕಲ್ಯಾಣ ಸೇವೆಯಲ್ಲಿ ತೊಡಗಿಸಿಕೊಂಡರು. ಅನೇಕ ಕಾಲದ ವರೆಗೆ ಈ ದೇಶದ ಸೇವೆಗೈಯುತ್ತಿದ್ದರು. ಕಾಡನ್ನು ಕಡಿದು ಕೃಷಿ ಯೋಗ್ಯ ಮಾಡಿದರು. ಕಲೆ ಮತ್ತು ವಿಜ್ಞಾನವು ಪ್ರಗತಿ ಕಂಡಿತು. ಸಮಾಜದಲ್ಲಿ ಚಾರಿತ್ರ್ಯ ನಿರ್ಮಾಣ ಕಾರ್ಯ ವೇರ್ಪಟ್ಟಿತು. ಇಲ್ಲಿನ ಸಂಪನ್ಮೂಲಗಳನ್ನು ಉತ್ತಮ ಕಾರ್ಯಗಳಿಗೆ ವಿನಿಯೋಗಿ ಸಿದರು. ಅಲ್ಲಾಹನು ಅನೇಕ ಕಾಲದ ವರೆಗೆ ತನ್ನ ಅನುಗ್ರಹಗಳನ್ನು ಅವರ ಮೇಲೆ ಸುರಿಸುತ್ತಿದ್ದನು. ದೇಶಕ್ಕೆ ಅವರಿಂದಾಗಿ ತುಂಬಾ ಪ್ರಯೋಜನವಾಯಿತು. ಆದರೆ ಕ್ರಮೇಣ ಅವರೂ ಕೆಡಲಾರಂಭಿಸಿದರು. ಅವರೊಳಗಿನ ಭಿನ್ನಾಭಿಪ್ರಾಯವು ಪರಸ್ಪರ ಸಂಘರ್ಷಕ್ಕೆ ದಾರಿ ಮಾಡಿಕೊಟ್ಟಿತು. ಸಾಮಾಜಿಕ ವ್ಯವಸ್ಥೆಯು ಕೆಡಲಾರಂಭಿಸಿದವು. ಅಧಿಕಾರ ಮೋಹದಿಂದ ಪರಸ್ಪರ ಕಾದಾಟಕ್ಕಿಳಿದರು. ಉತ್ತಮ ಮೌಲ್ಯಗಳನ್ನು ಗಾಳಿಗೆ ತೂರಿದರು. ಚಾರಿತ್ರ್ಯವು ಕೆಟ್ಟಿತು. ಕರ್ಮ ಮತ್ತು ವಿಶ್ವಾಸಗಳು ಮಸುಕುಗೊಂಡವು ಮತ್ತು ಅವರ ಹಿಂದಿನ ಜನಾಂಗದಲ್ಲಿ ಕಂಡು ಬರುತ್ತಿದ್ದಂತಹ ಎಲ್ಲಾ ಕೆಡುಕುಗಳು ಇವರಲ್ಲೂ ಕಂಡು ಬರತೊಡಗಿದವು. ಶಿಕ್ಷಣದ ಬಾಗಿಲು ಜನಸಾಮಾನ್ಯರಿಗೆ ಮುಚ್ಚಿತು. ಇದರಿಂದಾಗಿ ಜನರು ಅಜ್ಞಾನ-ಅಂಧಕಾರದಲ್ಲಾದರು. ವರ್ಣ, ವರ್ಗ, ಕೀಳು-ಮೇಲೆಂಬ ತಾರತಮ್ಯದಿಂದಾಗಿ ಸಮಾಜವು ಒಡೆದು ಹೋಯಿತು. ಉತ್ತಮ ತತ್ವಗಳನ್ನು ಸ್ವಜನ ಪಕ್ಷಪಾತಕ್ಕೆ ಬಲಿಕೊಡಲಾರಂಭಿಸಿದರು. ಸ್ವಾರ್ಥ ನಾಯಕರು ತಮಗೆ ಬೇಕಾದ ನಿಯಮಗಳನ್ನು ರೂಪಿಸಿ ಬಡವರನ್ನು ಮತ್ತು ಅಸಹಾಯಕರನ್ನು ತುಳಿಯಲಾರಂಭಿಸಿದರು. ಲಕ್ಷಗಟ್ಟಲೆ ಜನರು ಜಾನುವಾರುಗಳಂತೆ ಜೀವನ ಸಾಗಿಸ ಬೇಕಾಯಿತು. ಮಹಿಳೆಯರು ತಮ್ಮ ಮೂಲಭೂತ ಹಕ್ಕುಗಳಿಂದ ವಂಚಿಸಲ್ಪಟ್ಟರು. ಕಾನೂನುಗಳನ್ನು ನಿರ್ಮಿಸಿ ಮನುಷ್ಯ-ಮನುಷ್ಯರ ಮಧ್ಯೆ ಅಂತರವೇರ್ಪಡಿಸಲಾಯಿತು. ವಿಧವೆಯಾದ ಮಹಿಳೆಯರನ್ನು ಸತಿಸಹಗಮನ ಪದ್ಧತಿಗೆ ನಿರ್ಬಂಧಿಸಲಾಯಿತು. ಇವೆಲ್ಲದರ ಪರಿಣಾಮವಾಗಿ ಸಮಾಜದಲ್ಲಿ ಪರಸ್ಪರ ಅಪನಂಬಿಕೆ, ಒಳಜಗಳ, ಕ್ಷೋಭೆ ಮುಗಿಲು ಮುಟ್ಟಿತು. ವಿದೇಶಿಯರೂ ಪರಿಸ್ಥಿತಿಯ ಲಾಭ ಪಡೆಯಲು ಪ್ರಯತ್ನಿಸು ತ್ತಿದ್ದರು. ಇದೇ ಸಂದರ್ಭದಲ್ಲಿ ಅನೇಕ ಸಮಾಜ ಸುಧಾರಕರು ಸುಧಾರಣೆಗೆ ಪ್ರಯತ್ನಿಸಿದರು. ಆ ಪ್ರಯತ್ನಗಳು ಉತ್ತಮ ಪರಿಣಾಮ ಕಂಡಾಗ ಅವರಿಗೆ ಅಲ್ಲಾಹನು ಕಾಲಾವಕಾಶ ನೀಡುತ್ತಾ ಬಂದನು. ಆದರೆ ಕೆಡುಕು ಮತ್ತೆ ವ್ಯಾಪಕವಾಯಿತು ಮತ್ತು ನಿರ್ಮಾಣ ಕಾರ್ಯ ದಿನೇದಿನೇ ಕುಂಟುತ್ತಾ ಸಾಗಿತು. ಸುಧಾರಣಾ ಪ್ರಯತ್ನಗಳು ತಪ್ಪುದಾರಿ ಹಿಡಿಯಿತು. ಒಟ್ಟಿನಲ್ಲಿ ನಿರ್ಮಾಣಕಾರ್ಯ ಸಂಹಾರಕ್ಕಿಂತ ತುಂಬಾ ಕಡಿಮೆ ಯಾಯಿತು ಮತ್ತು ಮುಂದೆ ಸುಧಾರಣೆಗೊಳ್ಳುವ ನಿರೀಕ್ಷೆ ಮಸುಕಾದ ಕಾರಣ ಅಲ್ಲಾಹನು ಅವರಿಂದ ಅಧಿಕಾರ ಕಸಿದುಕೊಂಡನು. ಮಧ್ಯ ಏಷ್ಯನ್ನರಾದ ಅರಬರಿಗೆ ಇಲ್ಲಿ ಆಡಳಿತ ನಡೆಸುವ ಅವಕಾಶ ಒದಗಿಸಿದನು. ಅವರು ಇಸ್ಲಾಮ್ ಧರ್ಮವನ್ನು ಸ್ವೀಕರಿಸಿಕೊಂಡು ಒಳಿತಿನ ವಾಹಕರಾಗಿ ಮಾರ್ಪಟ್ಟಿದ್ದರು.

## ಪೂರ್ವಕಾಲ ಇತಿಹಾಸದ ಮೂಲ

ಮುಸ್ಲಿಮರು ಇಲ್ಲಿಗಾಗಮಿಸುವ ಮೊದಲು ಇಲ್ಲಿ ಸರಿಯಾಗಿ ಇತಿಹಾಸ ಬರೆಯುವ ಸಂಪ್ರದಾಯವಿರಲಿಲ್ಲ. ಆದುದರಿಂದ ಆ ಕಾಲದ ಇತಿಹಾಸ ಸಂಗ್ರಹಣೆ ಅತ್ಯಂತ ಕಷ್ಟಕರ ವಾಗುತ್ತದೆ. ಇತಿಹಾಸ ಸಂಗ್ರಹಣೆಗೆ ಅವಲಂಬಿಸಬೇಕಾದ ಮೂಲಗಳು ಈ ಕೆಳಗಿನಂತಿವೆ:

**1. ಧಾರ್ಮಿಕ ಗ್ರಂಥಗಳು:** ಹಿಂದೂ, ಬೌದ್ಧ, ಜೈನಧರ್ಮದ ಗ್ರಂಥಗಳಾದ ವೇದ, ಪುರಾಣ, ಉಪನಿಷತ್ತು, ರಾಮಾಯಣ, ಮಹಾಭಾರತ, ಮನುಸ್ಮೃತಿ, ತ್ರಿಪೀಠಕ ಇತ್ಯಾದಿಗಳು. ಇವುಗಳಲ್ಲಿ ಹೆಚ್ಚಿನವು ಸಂಸ್ಕೃತ ಭಾಷೆಯಲ್ಲಿವೆ. ಈ ಗ್ರಂಥಗಳು ಕೆಲವು ವರ್ಗದ ಜನರ ವಿಶ್ವಾಸ, ಆಚರಣೆಗಳು ಮತ್ತು ಪ್ರಮುಖ ವ್ಯಕ್ತಿಗಳ ಚರಿತ್ರೆಯನ್ನೊಳಗೊಂಡಿದೆ. ಆದರೆ ಈ ವ್ಯಕ್ತಿಗಳನ್ನು ಪರಿಚಯ ಪಡಿಸಿದ ರೀತಿ ನೋಡಿದರೆ ಸ್ವಾಭಾವಿಕವಾಗಿ ಸಂಶಯ ವುಂಟಾಗುತ್ತದೆ. ಅವು ಕಥೆಗಳಂತಿದ್ದು ಅದರಲ್ಲಿ ವಾಸ್ತವಿಕತೆ ಕಂಡು ಬರುವುದಿಲ್ಲ. ಕೆಲವು ಕಡೆಗಳಲ್ಲಿ ರಾಜಕೀಯ ಮತ್ತು ಸಾಮಾಜಿಕ ಪರಿಸ್ಥಿತಿಯ ಕಡೆಗೂ ಸೂಚನೆಯಿದೆ. ಅವರ ಜೀವನ ಶೈಲಿ ಹೇಗಿತ್ತು? ಅವರ ಆಡಳಿತ ವ್ಯವಸ್ಥೆ ಯಾವ ರೀತಿಯದ್ದಾಗಿತ್ತು? ಅಪರಾಧಕ್ಕೆ ಶಿಕ್ಷೆ ಯಾವ ತರದ್ದಾಗಿತ್ತು ಎಂಬಿತ್ಯಾದಿ.

**2. ಕಲ್ಲಿನ ಕೆತ್ತನೆಗಳು:** ಕಲ್ಲಿನ ಕೆತ್ತನೆಯ ಮೂಲಕವೂ ಕೆಲವು ವಿಷಯಗಳು ಸಿಕ್ಕಿವೆ. ಉದಾಹರಣೆಗೆ ಅಶೋಕನು ಕೆತ್ತಿಸಿದ ಬುದ್ಧ ಧರ್ಮದ ಶಿಕ್ಷಣ, ಅಲಹಾಬಾದ್‌ನ ಗುಹೆಯ ಕಂಬವೊಂದರಲ್ಲಿ ದೊರೆತ ಸಮುದ್ರಗುಪ್ತನ ಸಾಧನೆಗಳು ಇತ್ಯಾದಿ. ಇದರಿಂದ ಕೆಲವು ಧಾರ್ಮಿಕ ನೇತಾರರ ಬೋಧನೆಗಳು ಮತ್ತು ಕೆಲವು ರಾಜರುಗಳ ಸಾಧನೆಗಳು ಮುಂದೆ ಬರುತ್ತವೆ. ಆದರೆ ಅವರ ಸಾಧನೆಗಳನ್ನು ಉತ್ಪ್ರೇಕ್ಷೆಯಿಂದ ವರ್ಣಿಸಿರುವುದ ರಿಂದ ವಾಸ್ತವವನ್ನು ತಿಳಿಯುವುದು ಕಷ್ಟಕರವಾಗುತ್ತದೆ.

**3. ನಾಣ್ಯಗಳು:** ಕೆಲವು ಹಳೆಯಕಾಲದ ನಾಣ್ಯಗಳು ಸಿಕ್ಕಿವೆ. ಅದರ ಸಹಾಯ ದಿಂದಲೂ ಕೆಲವು ರಾಜರ ಅಥವಾ ರಾಜಮನೆತನದ ಪರಿಚಯವಾಗುತ್ತದೆ. ಅವರು ಯಾವ ಕಾಲದಲ್ಲಿದ್ದವರು? ಅವರ ಆಡಳಿತದ ವಿಸ್ತಾರ ಎಷ್ಟಿತ್ತು ಎಂಬುದನ್ನು ಕಂಡು ಹಿಡಿಯಲು ಸಾಧ್ಯವಾಗಿದೆ. ಕನಿಷ್ಕನ ಕಾಲದ ಚರಿತ್ರೆಯನ್ನು ಆ ಕಾಲದ ನಾಣ್ಯದಿಂದಲೇ ಪತ್ತೆ ಹಚ್ಚಲಾಗಿದೆ. ಆದರೆ ಯಾವುದಾದರೂ ಪ್ರದೇಶದಲ್ಲಿ ನಾಣ್ಯಗಳು ಕಂಡು ಬಂದರೆ ಅದು ಆ ರಾಜನ ಸಾಮ್ರಾಜ್ಯಕ್ಕೊಳಪಟ್ಟ ಪ್ರದೇಶವೆಂದು ಪರಿಗಣಿಸಲು ಸಾಧ್ಯವಿಲ್ಲ. ಏಕೆಂದರೆ ಹಳೆಯ ಕಾಲದಲ್ಲಿ ವ್ಯಾಪಾರದ ಉದ್ದೇಶದಿಂದ ಒಂದು ದೇಶದ ನಾಣ್ಯವನ್ನು ಇನ್ನೊಂದು ದೇಶದಲ್ಲೂ ಚಲಾಯಿಸಲಾಗುತ್ತಿತ್ತು. ನಮಗೆ ತಿಳಿದಂತೆ ಇಸ್ಲಾಮಿನ ಸಚ್ಚರಿತ ಖಲೀಫರ ಕಾಲದ ತನಕ ರೋಮಿನ ನಾಣ್ಯವು ಮುಸ್ಲಿಮ್ ರಾಷ್ಟ್ರಗಳಲ್ಲಿ ಚಲಾವಣೆಯಲ್ಲಿತ್ತು.

**4. ಶೋಧನೆಗಳು:** ಕೆಲವು ಕಡೆಗಳಲ್ಲಿ ಹಳೆಯಕಾಲದ ಪಳೆಯುಳಿಕೆಗಳು ಕಂಡು ಬರುತ್ತವೆ. ಅಗೆತದಿಂದ ಕಂಡುಬರುವ ಕುರುಹುಗಳಿಂದಲೂ ಕೆಲವು ಪ್ರದೇಶಗಳ ಧಾರ್ಮಿಕ, ಸಾಮಾಜಿಕ ಜೀವನದ ಬಗ್ಗೆ ಅಂದಾಜಿಸಲಾಗುತ್ತದೆ. ಹರಪ್ಪಾ ಮತ್ತು ಮೊಹೆಂಜದಾರೊ ನಾಗರಿಕತೆಯ ಅಧ್ಯಯನಕ್ಕೆ ಈ ಮೂಲವೇ ಸಹಕಾರಿಯಾಗಿದೆ.

**5. ಜೀವನ ಚರಿತ್ರೆ:** ಕೆಲವು ರಾಜರುಗಳು ತಮ್ಮ ಅಥವಾ ತಮ್ಮ ಕುಟುಂಬದ ಸಾಧನೆಗಳ ಕುರಿತು ಸೇವಕರಿಂದ ಬರೆಸುತ್ತಿದ್ದರು. ಅಂತಹ ಕೆಲವು ಚರಿತ್ರೆಗಳು ಹೇಗೋ ನಮ್ಮ ಬಳಿ ಇದೆ. ಆದರೆ ಅವರಲ್ಲಿ ರಾಜರುಗಳ ಚರಿತ್ರೆಯನ್ನು ಅತಿಶಯೋಕ್ತಿಯಿಂದ ವರ್ಣಿಸಲಾಗಿದೆ. ಆದುದರಿಂದ ಅವರ ಸತ್ಯತೆಯ ಕುರಿತು ಸಂಶಯವುಂಟಾಗುತ್ತದೆ. ಉದಾಹರಣೆಗೆ, ಹರ್ಷ ಚರಿತ, ಪೃಥ್ವಿರಾಜ ಅರಸು, ಕಾಶ್ಮೀರದ ರಾಜರ ಕುರಿತ 'ರಾಜತರಂಗಿಣಿ' ಇತ್ಯಾದಿ.

**6. ಪ್ರವಾಸ ಕಥನ:** ಚೀನಾದ ದಾರ್ಶನಿಕರಾದ ಫಾಹಿಯಾನ್, ಹ್ಯೂಯೆನ್‌ಸಾಂಗ್ ಮತ್ತು ಮುಸ್ಲಿಮ್ ದಾರ್ಶನಿಕರಾಗಿದ್ದ ಅಲ್‌ಬೈರೂನಿ, ಇಬ್ನು ಬತೂತ ಮೊದಲಾದವರು ತಮ್ಮ ಪ್ರವಾಸದ ನಂತರ ಪ್ರವಾಸ ಕಥನ ರಚಿಸಿದ್ದರು. ಅದರಲ್ಲಿ ಕೆಲವು ಪ್ರದೇಶದ ಪರಿಸ್ಥಿತಿಯ ಕುರಿತು ಬೆಳಕು ಚೆಲ್ಲಲಾಗಿದೆ. ಆದರೆ ಅವರಿಗೆ ಇಲ್ಲಿನ ಭಾಷೆಯು ಅಪರಿಚಿತವಾಗಿತ್ತು ಮತ್ತು ಅವರು ಕೆಲವು ನಿರ್ದಿಷ್ಟ ಪ್ರದೇಶಗಳಿಗೆ ಮಾತ್ರ ತಮ್ಮ ಪ್ರವಾಸವನ್ನು ಸೀಮಿತಗೊಳಿಸಿದ್ದರು. ಆದುದರಿಂದ ಅವರ ಬರಹಗಳ ಮೇಲೂ ಹೆಚ್ಚಿನ ಭರವಸೆ ಇಡಲು ಸಾಧ್ಯವಿಲ್ಲ.

ಈ ಎಲ್ಲ ಕಷ್ಟಗಳ ಹೊರತಾಗಿಯೂ ನಮ್ಮ ದೇಶದ ಪೂರ್ವಕಾಲ ಇತಿಹಾಸವನ್ನು ಸ್ವಲ್ಪ ಮಟ್ಟಿಗೆ ಸಂಗ್ರಹಿಸಬಹುದು. ಆದರೆ ಅನೇಕ ಊಹೆಗಳನ್ನು ಮಾಡಬೇಕಾಗುತ್ತದೆ. ಮುಸ್ಲಿಮರ ಕಾಲದ ಇತಿಹಾಸ ರಚಿಸುವುದು ಸುಲಭ. ಆದುದರಿಂದ ಅವರ ಇತಿಹಾಸವನ್ನು ಸಮಗ್ರವಾಗಿ ವಿವರಿಸಲಾಗಿದೆ.

## ಮುಸ್ಲಿಮರು

ಆರಂಭದ ಕೆಲವು ಶತಮಾನಗಳಲ್ಲಿ, ಹೊರಗಿನಿಂದ ಬಂದ ಮುಸ್ಲಿಮರು ನಾಲ್ಕು ವರ್ಗದವರಾಗಿದ್ದರು-

1. ಅರೇಬಿಯಾದ ವ್ಯಾಪಾರಿಗಳು.
2. ಅರೇಬಿಯಾದ ದಿಗ್ವಿಜಯಿಗಳು.
3. ಇಸ್ಲಾಮ್ ಧರ್ಮಪ್ರಚಾರಕರು.
4. ತುರ್ಕಿಯ ದಿಗ್ವಿಜಯಿಗಳು.

## 1. ಅರೇಬಿಯಾದ ವ್ಯಾಪಾರಿಗಳು

ಭಾರತದೊಂದಿಗೆ ಅರಬರ ವ್ಯಾಪಾರ ಸಂಬಂಧವು ಬಹಳ ಹಳೆಯಕಾಲದಿಂದಲೇ ಜಾರಿಯಲ್ಲಿತ್ತು. ಇಸ್ಲಾಮ್ ಸ್ವೀಕರಿಸಿಕೊಂಡ ಬಳಿಕ ಅವರು ಉತ್ತಮ ಗುಣಗಳನ್ನು ಮೈಗೂಡಿಸಿಕೊಂಡಿದ್ದರು. ಅವರ ಪ್ರಾಮಾಣಿಕತೆ, ಸತ್ಯಸಂಧತೆ, ದೇವಭಯ ಮತ್ತು ಸದ್ವರ್ತನೆಯು ಅವರ ವ್ಯಾಪಾರವನ್ನು ವೃದ್ಧಿಸಿತಲ್ಲದೆ ಅವರನ್ನು ಪರಿವರ್ತನೆಗೊಳಿಸಿದ್ದ ಇಸ್ಲಾಮ್ ಧರ್ಮದಿಂದಲೂ ಭಾರತೀಯರು ಆಕರ್ಷಿತರಾದರು. ವ್ಯಾಪಾರದ ಜೊತೆಜೊತೆಗೆ

ಸತ್ಯಧರ್ಮದ ಪ್ರಚಾರ, ಒಳಿತಿನ ಸಂಸ್ಥಾಪನೆ, ಕೆಡುಕಿನ ನಿರ್ಮೂಲನೆಗೂ ಕೂಡ ಪ್ರಯತ್ನಿಸುತ್ತಿದ್ದರು. ಈ ಮೂಲಕ ಅವರು ಭಾರತದ ಕರಾವಳಿ ಪ್ರದೇಶದಲ್ಲಿ, ವಿಶೇಷವಾಗಿ ಉತ್ತರ ಕರಾವಳಿಯಲ್ಲಿ ಉತ್ತಮ ಪ್ರಭಾವ ಬೀರಿದರು. ಇಂದಿಗೂ ಕೂಡ ಅವರ ಪ್ರಭಾವವನ್ನು ಕಾಣಬಹುದಾಗಿದೆ.

## 2. ಅರೇಬಿಯಾದ ದಿಗ್ವಿಜಯಿಗಳು

ಕ್ರಿ.ಶ. 712ರಲ್ಲಿ ಅರಬರು ಭಾರತವನ್ನು ಪ್ರವೇಶಿಸಿದರು ಮತ್ತು ಕ್ಷಿಪ್ರವಾಗಿ ಸಿಂಧ್, ಬಲೂಚಿಸ್ತಾನ್ ಮತ್ತು ಪಂಜಾಬ್‌ನ ಪರಿಸರದಲ್ಲಿ ಹಬ್ಬಿದರು. ಮುಹಮ್ಮದ್ ಬಿನ್ ಕಾಸಿಮನು ಮರಳಿ ಹೋದ ನಂತರ ಅರಬರ ಆಗಮನವು ನಿಂತಿತು. ಆದರೆ ಅರಬರು ಜಯಗಳಿಸಿದ ಪ್ರದೇಶಗಳನ್ನು ಅನೇಕ ವರ್ಷಗಳ ತನಕ ತಮ್ಮ ಕೈವಶವಿರಿಸಿ ಕೊಂಡರು. ಅರಬರಿಗಿದ್ದ ಕೆಲವು ವಿಶಿಷ್ಟ ಗುಣಗಳಿಂದ ತಮ್ಮ ಪರಿಸರದಲ್ಲಿ ಭಾರೀ ಪ್ರಭಾವ ಬೀರಿದರು. ಇವರಲ್ಲಿ ಹೆಚ್ಚಿನವರು ಪ್ರಾಮಾಣಿಕರು, ದೇವಭಯವುಳ್ಳವರು ಹಾಗೂ ಇಸ್ಲಾಮಿನ ಶಿಕ್ಷಣವನ್ನು ಮೈಗೂಡಿಸಿಕೊಂಡವರಾಗಿದ್ದರು. ನ್ಯಾಯಪಾಲಕರಾಗಿದ್ದರು. ಆಡಂಬರ, ಸುಖಲೋಲುಪತೆಯಿಂದ ದೂರವಿದ್ದು ಸರಳ ಜೀವನ ಸಾಗಿಸುತ್ತಿದ್ದರು. ತಮ್ಮ ಎಲ್ಲಾ ಕೆಲಸಗಳನ್ನು ಪರಸ್ಪರ ಸಮಾಲೋಚನೆಯಿಂದ ನಡೆಸುತ್ತಿದ್ದರು. ಸ್ಥಳೀಯ ಜನರು ಅವರ ಚಾರಿತ್ರ್ಯದಿಂದ ಪ್ರಭಾವಕ್ಕೊಳಗಾದರು. ಅರಬರ ಸದ್ವರ್ತನೆ ಜನರ ಮನಗೆದ್ದಿತು ಮತ್ತು ಅನೇಕರು ಇಸ್ಲಾಮ್ ಧರ್ಮವನ್ನು ಸ್ವೀಕರಿಸಿದರು.

## 3. ಇಸ್ಲಾಮ್ ಧರ್ಮಪ್ರಚಾರಕರು

ಅಲ್ಲಾಹನ ಅನೇಕ ಸಜ್ಜನ ದಾಸರು ಕೇವಲ ಸತ್ಯಧರ್ಮವನ್ನು ಪ್ರಚುರಪಡಿಸಲಿಕ್ಕಾಗಿ ಇಲ್ಲಿಗಾಗಮಿಸಿದ್ದರು. ಉದಾಹರಣೆ, ಮಈನುದ್ದೀನ್ ಚಿಶ್ತಿ(ರ), ಶಂಸ್ ತಬ್‌ರೇಝ್(ರ), ಬಾಬಾ ಫರೀದ್‌ರ(ರ) ಕುಟುಂಬ ಮತ್ತು ಸಂಗಾತಿಗಳು. ಈ ಮಹಾತ್ಮರು ಅನೇಕ ಕಷ್ಟಗಳನ್ನು ಸಹಿಸಿಕೊಂಡು ಒಂದು ಅಪರಿಚಿತ ದೇಶದಲ್ಲಿ ಜೀವಿಸಿದರು. ಧರ್ಮ ಪ್ರಚಾರಕ್ಕಾಗಿ ಸಾದ್ಯಂತ ಶ್ರಮಿಸಿದರು. ಅವರ ಉನ್ನತ ಚಾರಿತ್ರ್ಯ, ಸತ್ಯಸಂಧತೆ, ದೇವಭಯ ದಿಂದಾಗಿ ಅನೇಕರಿಗೆ ಇಸ್ಲಾಮ್ ಎಂಬ ರಾಜಮಾರ್ಗ ದೊರೆಯುವಂತಾಯಿತು. ಜನರಿಗೆ ಸಂಶಯ ಮತ್ತು ಪಥಭ್ರಷ್ಟತೆಗಳಿಂದ ಮುಕ್ತಿ ದೊರೆಯಿತು. ಜನರು ತಮ್ಮ ಚಾರಿತ್ರ್ಯ, ವ್ಯವಹಾರಗಳನ್ನು ಸರಿಪಡಿಸಿಕೊಂಡರು ಮತ್ತು ಇಸ್ಲಾಮ್‌ಗಾಗಿ ಅನೇಕರ ಹೃದಯಗಳು ತೆರೆಯಿತು. ಆ ಮಹಾನ್ ಸುಧಾರಕರ, ಸತ್ಯಧರ್ಮ ಪ್ರಚಾರಕರ ಮೇಲೆ ಅಲ್ಲಾಹನ ಅಪಾರ ಕರುಣೆಯಿರಲಿ.

## 4. ತುರ್ಕಿಯ ದಿಗ್ವಿಜಯಿಗಳು

ಅರಬರು ತಮ್ಮ ಕ್ಷೇತ್ರವನ್ನು ಹೆಚ್ಚಾಗಿ ಭಾರತದ ಉತ್ತರ ಮತ್ತು ಕರಾವಳಿ ಪ್ರದೇಶಗಳಿಗೆ ಸೀಮಿತಗೊಳಿಸಿದ್ದರು. ಅದು ಇಂದಿನ ಪಾಕಿಸ್ತಾನವಾಗಿದೆ. ಅವರಿಗೆ ಇಲ್ಲಿನ

ಆಂತರಿಕ ಪ್ರದೇಶಗಳಲ್ಲಿ ಪ್ರಭಾವ ಬೀರಲಾಗಲಿಲ್ಲ. ಇದೇ ಸಂದರ್ಭದಲ್ಲಿ ತುರ್ಕರು ಕಷ್ಟಪಟ್ಟು ದೆಹಲಿಯ ಸಾಮ್ರಾಜ್ಯವನ್ನು ವಶಪಡಿಸಿಕೊಂಡರು ಮತ್ತು ಅಲ್ಪಾವಧಿಯಲ್ಲಿ ದೇಶದ ಮೂಲೆಮೂಲೆಗೂ ಹರಡಿದರು. ಅವರು ದೇಶದಲ್ಲಿ ಉತ್ತಮ ವ್ಯವಸ್ಥೆಯನ್ನು ಸ್ಥಾಪಿಸಿ, ಶಾಂತಿ ಸುವ್ಯವಸ್ಥೆ ಕಾಪಾಡಿಕೊಂಡರು ಮತ್ತು ತಮ್ಮ ಪ್ರಾಣವನ್ನೂ ಪಣಕ್ಕಿಟ್ಟು ಅಕ್ರಮಿಗಳಾದ ತಾರ್ತಾರಿಗಳು ಮತ್ತು ಮಂಗೋಲಿಯರನ್ನು ಎದುರಿಸುತ್ತಾ ಇದ್ದರು. ತಾರ್ತಾರಿಗಳು ಅನೇಕ ದೇಶಗಳನ್ನು ಧ್ವಂಸಗೊಳಿಸಿದ್ದರು. ಅವರಿಂದಾಗಿ ಬಗ್ದಾದ್ ಸರ್ವನಾಶವಾಯಿತು. ತುರ್ಕರ ಈ ಸಾಧನೆಯನ್ನು ನಾವೆಂದೂ ಮರೆಯುವಂತಿಲ್ಲ. ತುರ್ಕರು ಈ ಆಕ್ರಮಣಕಾರರಿಂದ ದೇಶವನ್ನು ರಕ್ಷಿಸದಿರುತ್ತಿದ್ದರೆ ಮಧ್ಯ ಏಷ್ಯಾದ ಇತರ ದೇಶಗಳಂತೆ ನಮ್ಮ ದೇಶವನ್ನು ತಾರ್ತಾರಿಗಳು ಮತ್ತು ಮಂಗೋಲಿಯನ್ನರು ಧ್ವಂಸ ಗೊಳಿಸುತ್ತಿದ್ದರು. ತುರ್ಕರು ಧೈರ್ಯಶಾಲಿಗಳು, ಶ್ರಮಜೀವಿಗಳು ಮತ್ತು ಸಂಘಟಿತ ಹೋರಾಟಗಾರರಾಗಿದ್ದರು. ಅವರಲ್ಲಿ ನಾಯಕತ್ವದ ಉತ್ತಮ ಗುಣಗಳಿದ್ದುವು. ಆದರೆ ಅವರು ಇಸ್ಲಾಮಿನ ವಾಹಕರು ಮತ್ತು ಉನ್ನತ ಚಾರಿತ್ರ್ಯವಂತರಾದ ಅರಬರಿಗಿಂತ ಹಿಂದಿದ್ದರು. ಆದರೂ ಈ ದೇಶದಲ್ಲಿ ಒಂದು ಉತ್ತಮ ಮುಸ್ಲಿಮ್ ಆಳ್ವಿಕೆಯನ್ನು ಸ್ಥಾಪಿಸುವಲ್ಲಿ ಯಶಸ್ವಿಯಾದರು. ಅವರ ವಿವಿಧ ಕುಟುಂಬದ ಜನರು ಹೆಚ್ಚುಕಮ್ಮಿ ಇನ್ನೂರು ವರ್ಷಗಳ ವರೆಗೆ ಆಳ್ವಿಕೆ ನಡೆಸಿದರು ಮತ್ತು ಈ ಭೂಮಿಯಲ್ಲಿ ಅತ್ಯುತ್ತಮ ಪ್ರಭಾವವನ್ನು ಬೀರಿದರು.

## ಮುಸ್ಲಿಮರ ಪ್ರಭಾವ

ಮೇಲೆ ಪ್ರಸ್ತಾಪಿಸಲಾದ ಮುಸ್ಲಿಮರು ತಮ್ಮ ವೈಶಿಷ್ಟ್ಯತೆಯಿಂದ ಇಲ್ಲಿನ ಧಾರ್ಮಿಕ, ಸಾಮಾಜಿಕ, ರಾಜಕೀಯ ಜೀವನದ ಮೇಲೆ ಪ್ರಭಾವ ಬೀರಿದರು. ಅಂದು ಇಡೀ ದೇಶ ಸಣ್ಣಸಣ್ಣ ತುಂಡುಗಳಾಗಿ ವಿಂಗಡಿಸಲ್ಪಟ್ಟಿತ್ತು. ಪ್ರತಿಯೊಂದಕ್ಕೆ ತಮ್ಮದೇ ಆಡಳಿತವಿತ್ತು. ರಾಜರು ಪರಸ್ಪರ ಕಾದಾಟಕ್ಕಿಳಿಯುತ್ತಿದ್ದರು. ಸಮಾಜದಲ್ಲಿ ಒಡಕು, ಅನ್ಯಾಯ, ಅಶಾಂತಿ ವ್ಯಾಪಕವಾಗಿತ್ತು. ತುರ್ಕರು ಇಲ್ಲಿ ಶಾಂತಿ ಸುವ್ಯವಸ್ಥೆ ಸ್ಥಾಪಿಸಿದರು. ಎಲ್ಲಾ ಭಾಗಗಳನ್ನು ಒಂದೇ ಆಡಳಿತಕ್ಕೆ ಅಧೀನಗೊಳಿಸಿ ಏಕತೆಯ ಕಲ್ಪನೆ ತೋರಿಸಿಕೊಟ್ಟರು. ಸಾಮಾಜಿಕ ಕೆಡುಕನ್ನು ದೂರೀಕರಿಸಿದರು. ನ್ಯಾಯಪಾಲನೆಯ ಉತ್ತಮ ಮಾದರಿಯಾಗಿದ್ದರು. ವಿಜ್ಞಾನ ಮತ್ತು ಕಲೆ ಅಭಿವೃದ್ಧಿ ಹೊಂದಿದವು. ಜನಕಲ್ಯಾಣ ಕೆಲಸವೇರ್ಪಟ್ಟಿತ್ತು. ಇವೆಲ್ಲದಕ್ಕಿಂತ ಹೆಚ್ಚಾಗಿ ಮುಸ್ಲಿಮರು ತಮ್ಮ ವೈಶಿಷ್ಟ್ಯವನ್ನು ಉಳಿಸಿಕೊಂಡು ಗಣನೀಯ ಸಂಖ್ಯೆಯ ಜನರಿಗೆ ಸತ್ಯಧರ್ಮದ ಪರಿಚಯ ಮಾಡಿದರು. ಆದರೆ ಹಿಂದೆ ಹೊರಗಿನಿಂದ ಬಂದ ಯಾವುದೇ ಜನಾಂಗವು ತಮ್ಮ ವೈಶಿಷ್ಟ್ಯವನ್ನು ಕಾಪಾಡದೆ ಇಲ್ಲಿನ ವಾತಾವರಣಕ್ಕೆ ಹೊಂದಿಕೊಂಡು ತಾವಾಗಿಯೇ ಪರಿವರ್ತನೆಗೊಂಡರು.

## ಸತ್ಯಧರ್ಮದೊಂದಿಗೆ ಭಾರತೀಯರ ವರ್ತನೆ

ಈ ದೇಶದ ವಿಶಾಲತೆ, ಸಂದೇಶ ಪ್ರಚಾರದಲ್ಲಿ ಮುಸ್ಲಿಮರು ತೋರಿದ ನಿರ್ಲಕ್ಷ್ಯ ಹಾಗೂ ಮಾತು ಮತ್ತು ಕೃತಿಯ ಅಂತರದಿಂದಾಗಿ ಇಲ್ಲಿನ ಬಹುಸಂಖ್ಯಾತ ಜನರು ಸತ್ಯಧರ್ಮವನ್ನು ತಿಳಿಯದಾದರು.

ಸತ್ಯಧರ್ಮವನ್ನು ಅರಿತವರು ಈ ಕೆಳಗಿನಂತಿದ್ದರು:

1. ಒಂದು ಗಣನೀಯ ಸಂಖ್ಯೆಯ ಜನರು ಇಸ್ಲಾಮಿನ ಸರಳಸತ್ಯ ಮತ್ತು ಪ್ರಾಯೋಗಿಕ ಜೀವನ ವ್ಯವಸ್ಥೆಗೆ ಆಕರ್ಷಿತರಾಗಿ ಇಸ್ಲಾಮ್ ಧರ್ಮವನ್ನು ಸ್ವೀಕರಿಸಿ ಕೊಂಡವರು. ಅವರು ಮುಸ್ಲಿಮ್ ಸಮಾಜದ ಭಾಗವಾದರು.

2. ಕೆಲವರು ತಮ್ಮ ಪೂರ್ವಜರ ವಿಶ್ವಾಸ-ಆಚರಣೆಯ ಅನುಕರಣೆಯಿಂದಾಗಿ ಸತ್ಯ-ಧರ್ಮ ಸ್ವೀಕರಿಸಲು ಮುಂದಾಗಲಿಲ್ಲ ಮತ್ತು ಅವರು ಅದರಲ್ಲೇ ಸ್ಥಿರವಾದರು.

3. ಕೆಲವರು ಇಸ್ಲಾಮಿನ ಮೂಲಭೂತ ಶಿಕ್ಷಣ ಮತ್ತು ಅದರ ವೈಶಿಷ್ಟ್ಯಗಳಿಂದ ಪ್ರಭಾವಿತರಾಗಿದ್ದರು. ಸತ್ಯಧರ್ಮ ಸ್ವೀಕಾರದಿಂದಾಗಬಹುದಾದ ಕಷ್ಟ-ನಷ್ಟದ ಭಯದಿಂದ ಇಸ್ಲಾಮಿನೊಳಗೆ ಸಂಪೂರ್ಣವಾಗಿ ಪ್ರವೇಶಿಸಲಿಲ್ಲ. ಆದರೆ ಅವರು ತಮ್ಮ ಹಿರಿಯರ ಮತಕ್ಕೆ ಇಸ್ಲಾಮಿನ ಅನೇಕ ಅಂಶಗಳನ್ನು ಸೇರಿಸಿ ಒಂದು ಹೊಸ ಮತವನ್ನು ಹುಟ್ಟು ಹಾಕಿದರು. ಅದನ್ನು 'ಭಕ್ತಿಮತ'ವೆಂದು ಕರೆಯಲಾಗುತ್ತಿತ್ತು.

## ಭಕ್ತಿಮತ

ಭಕ್ತಿಮತವೆಂದರೆ 'ದೇವಾರಾಧಕರ ಮತ' ಎಂದಾಗಿದೆ. ಈ ಮತದ ವಾಹಕರಲ್ಲಿ ರಾಮಾನುಜರು, ರಮಾನಂದರು, ಚೇತನರು ಮತ್ತು ಗುರುನಾನಕರು ಪ್ರಖ್ಯಾತರಾಗಿದ್ದಾರೆ. ರಾಮಾನುಜರು ಉತ್ತರ ಭಾರತದಲ್ಲಿ, ರಮಾನಂದರು ಮತ್ತು ಅವರ ಶಿಷ್ಯರಾದ ಕಬೀರದಾಸರು ದಕ್ಷಿಣ ಭಾರತದಲ್ಲಿ, ಚೈತನ್ಯರು ಬಂಗಾಳದಲ್ಲಿ ಮತ್ತು ಗುರುನಾನಕರು ಪಂಜಾಬಿನಲ್ಲೂ ಈ ಮತವನ್ನು ಪ್ರಚಾರ ಮಾಡಿದರು.

ಮುಸ್ಲಿಮರು ಇಲ್ಲಿಗಾಗಮಿಸುವ ಮೊದಲು ದೇಶದಲ್ಲಿ ವಿಗ್ರಹಪೂಜೆ ವ್ಯಾಪಕ ವಾಗಿತ್ತು. ಮುಸ್ಲಿಮರ ಏಕದೇವ ವಿಶ್ವಾಸದ ಪ್ರಭಾವಹೊಂದಿ ಈ ಮತಾನುಯಾಯಿಗಳು ವಿಗ್ರಹಾರಾಧನೆಯ ವಿರುದ್ಧ ಧ್ವನಿಯೆಬ್ಬಿಸಿದರು ಮತ್ತು ವಿಗ್ರಹಾರಾಧಕರನ್ನು ಅಪಹಾಸ್ಯ ಮಾಡುತ್ತಿದ್ದರು. ಅಂದು ಸಮಾಜದಲ್ಲಿ ಉಚ್ಚ-ನೀಚತೆಯನ್ನು ಹುಟ್ಟಿನಿಂದಲೇ ಗುರುತಿಸಲಾಗುತ್ತಿತ್ತು. ಭಕ್ತಿ-ಮತಾನುಯಾಯಿಗಳು ಈ ಸಾಮಾಜಿಕ ಅನಿಷ್ಟದ ವಿರುದ್ಧವೂ ಹೋರಾಡಿದರು. ಸಂಕುಚಿತ ಮನೋಭಾವದ ಜನರು ಇತರ ಮತವಿಶ್ವಾಸದ ಜನರೊಂದಿಗೆ ಬೆರೆಯುತ್ತಿರಲಿಲ್ಲ ಮತ್ತು ಅವರ ಅಸ್ತಿತ್ವವನ್ನು ಸಹಿಸುತ್ತಿರಲಿಲ್ಲ. ಅಂತಹ

ಸಂಕುಚಿತ ಮನೋಭಾವದವರನ್ನೂ ಸರಿದಾರಿಗೆ ತರಲು ಪ್ರಯತ್ನಿಸಿದರು. ಈ ಮತದ ಅನುಯಾಯಿಗಳು ಕೆಲವು ಮೂಲಭೂತ ವಿಷಯಗಳಲ್ಲಿ ಭಿನ್ನಾಭಿಪ್ರಾಯ ಹೊಂದಿದ್ದರೂ ಈ ಕೆಳಗಿನ ವಿಷಯಗಳಲ್ಲಿ ಅವರೆಲ್ಲರೂ ಒಂದೇ ಆಗಿದ್ದರು-

1. ಏಕದೇವ ವಿಶ್ವಾಸ.
2. ದೇವಾನುಸರಣೆಯಿಂದಲೇ ಮುಕ್ತಿ. ವಿಗ್ರಹಾರಾಧನೆ ತಪ್ಪು.
3. ಮನುಷ್ಯರೆಲ್ಲರೂ ದೇವನ ಸೃಷ್ಟಿಗಳು, ಆದುದರಿಂದ ಉಚ್ಚ-ನೀಚತೆ ಸಲ್ಲದು.
4. ಎಲ್ಲಾ ಮಾನವರು ಸಮಾನರು ಮತ್ತು ಸಹೋದರರಾಗಿದ್ದಾರೆ.
5. ತಮ್ಮ ಗುರುಗಳೊಂದಿಗೆ ದೃಢವಾದ ವಿಶ್ವಾಸವಿರಬೇಕು.
6. ಗುರು ಯಾರೆಂದರೆ, ಆತನು ಸಂಶಯಗಳನ್ನು ನಿವಾರಿಸಿ, ದೇವ ಸಾಮೀಪ್ಯದ ಮಾರ್ಗ ತೋರಿಸುವವನಾಗಿರಬೇಕು.
7. ಎಲ್ಲಾ ಧರ್ಮಗಳು ದೇವನನ್ನು ಸಮೀಪಿಸುವ ಮಾರ್ಗಗಳಾಗಿವೆ. ಆದುದರಿಂದ ಎಲ್ಲಾ ಧರ್ಮಗಳು ಸತ್ಯ.
8. ಎಲ್ಲಾ ಧರ್ಮಗಳು ಬಾಹ್ಯನೋಟಕ್ಕೆ ಭಿನ್ನಭಿನ್ನವಾಗಿ ಕಂಡುಬರುತ್ತವೆ. ಆದರೆ ಎಲ್ಲವೂ ತಲುಪುವುದು ಒಂದೇ ಕಡೆಗೆ ಅಂದರೆ ದೇವನೆಡೆಗೆ ಅಥವಾ ಮುಕ್ತಿಯೆಡೆಗೆ.
9. ಹೃದಯವನ್ನು ಎಲ್ಲಾ ರೀತಿಯ ಕೆಟ್ಟ ವಿಚಾರಗಳಿಂದ ದೂರವಿರಿಸಬೇಕು. ಆಗ ಮಾತ್ರ ದೇವನನ್ನು ಕಾಣಬಹುದು. ಅಸೂಯೆ, ಕೋಪ, ದ್ವೇಷದಿಂದ ಹೃದಯ ಮಸುಕಾಗುತ್ತದೆ. ಆದುದರಿಂದಲೇ ದೇವರು ಹೃದಯದಿಂದ ದೂರವಾಗುತ್ತಾನೆ.

## ಸಮಾಜದಲ್ಲಿ 'ಭಕ್ತಿಮತ'ದ ಪರಿಣಾಮಗಳು

ಸಮಾಜದಲ್ಲಿ 'ಭಕ್ತಿಮತ'ದ ಪರಿಣಾಮಗಳು ಈ ಕೆಳಗಿನಂತಿತ್ತು:

1. ವಿಗ್ರಹಾರಾಧನೆ ಕಡಿಮೆಯಾಯಿತು.
2. ಉಚ್ಚ-ನೀಚತೆಯ ಬಗ್ಗೆ ಜನರು ಜಾಗೃತರಾದರು.
3. ತನ್ನ ವಿಶ್ವಾಸಕ್ಕೆ ವಿರುದ್ಧವಾದ ಜನರೊಂದಿಗೆ ಉತ್ತಮವಾಗಿ ವರ್ತಿಸತೊಡಗಿದರು.
4. 'ಭಕ್ತಿಮತ'ವನ್ನು ಪ್ರಾದೇಶಿಕ ಭಾಷೆಯಲ್ಲಿ ಪ್ರಚಾರ ಮಾಡಿದಾಗ, ಭಾಷೆಗಳು ಅಭಿವೃದ್ಧಿಯಾಯಿತು.
5. ಮುಸ್ಲಿಮೇತರರ ಸಂಪ್ರದಾಯ ಮತ್ತು ಆಚರಣೆಗಳಿಗೆ ಪೆಟ್ಟುಬಿತ್ತು.
6. ಗುರುಗಳೊಂದಿಗಿನ ವಿಶೇಷ ಭಕ್ತಿ ಭಾವನೆಯು 'ದೇವಭಕ್ತಿ'ಯಿಂದ 'ಗುರುಭಕ್ತಿ'ಯ ರೂಪ ತಾಳಿತು.
7. 'ಅನುಸರಣೆ'ಯನ್ನು ತಪ್ಪಾಗಿ ಅರ್ಥೈಸಲಾಯಿತು. ಪರಸ್ಪರ ವಿರುದ್ಧ ವಿಷಯಗಳಲ್ಲಿ ಪ್ರತಿಯೊಬ್ಬರನ್ನು ಸರಿಯೆನ್ನುವುದನ್ನು 'ಅನುಸರಣೆ' ಎನ್ನಲಾಯಿತು.
8. 'ಸರ್ವಧರ್ಮ ಸಮಭಾವ'ದ ಪ್ರಚಾರವು ಜನರಲ್ಲಿ ಸತ್ಯಧರ್ಮವನ್ನು ತಿಳಿಯುವ ಜಿಜ್ಞಾಸೆ ಇಲ್ಲವಾಗಿಸಿತು ಮತ್ತು ಇಸ್ಲಾಮಿನ ಸಂದೇಶ ಪ್ರಚಾರಕ್ಕೆ ಇದು ಅಡ್ಡಿಯಾಯಿತು.

9. ಕೆಲವು ಅಜ್ಞಾನಿ ಮುಸ್ಲಿಮರೂ 'ಸರ್ವಧರ್ಮಸತ್ಯ' ಎಂಬ ವಾದಕ್ಕೆ ಬಲಿ ಬಿದ್ದರು ಮತ್ತು ಎಲ್ಲಾ ಧರ್ಮಗಳನ್ನು ಒಂದೇ ಎಂದು ಪರಿಗಣಿಸತೊಡಗಿದರು. ಆದರೆ ಎಲ್ಲಾ ಧರ್ಮಗಳು ಒಂದೇ ಆಗಿರಲು ಸಾಧ್ಯವಿಲ್ಲ. ಏಕೆಂದರೆ ಪರಸ್ಪರ ವಿರುದ್ಧ ದಿಕ್ಕುಗಳಲ್ಲಿ ಚಲಿಸುವ ಮಾರ್ಗಗಳಿಂದ ಹೊರಟು ಜನರು ಒಂದೇ ಕಡೆ ಸೇರಲು ಸಾಧ್ಯವಿಲ್ಲವಷ್ಟೆ. ಅದೇ ರೀತಿ ರಾಮ-ರಹೀಮ, ಕುರ್‌ಆನ್-ಪುರಾಣವನ್ನು ಒಂದೇ ಎಂದು ಭಾವಿಸತೊಡಗಿದರು. ಆದರೆ ಅವರ ಶಿಕ್ಷಣಗಳಲ್ಲಿ ಭೂಮಿ-ಆಕಾಶಗಳ ಅಂತರವಿದೆ.

## ಮುಸ್ಲಿಮರ ಮೇಲೆ ಇಲ್ಲಿನ ಪ್ರಭಾವ

ಭಾರತಕ್ಕೆ ಬಂದ ತುರ್ಕರು ಮತ್ತು ಮಧ್ಯ ಏಷ್ಯಾದ ಮುಸ್ಲಿಮರಲ್ಲಿ ಹೆಚ್ಚಿನವರು ಅರಬರಂತೆ ಇಸ್ಲಾಮೀ ದೃಷ್ಟಿಕೋನವಿರುವವರಾಗಿರಲಿಲ್ಲ. ಅವರಲ್ಲಿ ಅನೇಕ ಕುಂದು ಕೊರತೆಗಳು ಮೊದಲೇ ಇದ್ದುವು. ಇಲ್ಲಿಗೆ ಬಂದ ನಂತರ ಅಧಿಕಾರ ಮೋಹ ಮತ್ತು ಇಲ್ಲಿನ ಸಂಸ್ಕೃತಿಯ ಪ್ರಭಾವವು ಅವರನ್ನು ಇನ್ನಷ್ಟು ಕೆಡಿಸಿತು.

ಉದಾಹರಣೆ:

1. ಸಂತೋಷ ಕೂಟಗಳು, ಜನನ ಮತ್ತು ಮರಣ ದಿನಗಳಲ್ಲಿ ವಿಶೇಷಾಚರಣೆ ಇತ್ಯಾದಿಗಳು. ಇದಕ್ಕೆ ಇಸ್ಲಾಮಿನಲ್ಲಿ ಯಾವುದೇ ಅವಕಾಶವಿಲ್ಲ.
2. ಸಂಪತ್ತು-ಸೌಕರ್ಯದ ಹೆಚ್ಚಳವು ಆಡಂಬರ ಮತ್ತು ವಿಲಾಸೀ ಜೀವನದಲ್ಲಿ ಮುಳುಗಿಸಿತು.
3. ಅಧಿಕಾರ ಮೋಹದಿಂದಾಗಿ ಅಕ್ರಮ-ಅನ್ಯಾಯಗಳು ಆರಂಭವಾದವು.
4. ಕೆಲವು ಉತ್ತರಾಧಿಕಾರಿಗಳ ಸ್ವೇಚ್ಛೆಯು ಸಮಾಜದ ಗಣ್ಯರ ಮತ್ತು ಸೈನಿಕ ವರ್ಗದ ಹಿತಾಕಾಂಕ್ಷೆಗೆ ಮಾರಕವಾಯಿತು ಮತ್ತು ಅವರಲ್ಲಿ ನೀತಿ-ನಿಷ್ಠೆ, ತ್ಯಾಗ ಬಲಿದಾನದ ಬದಲು ಸ್ವಾರ್ಥ ಮನೋಭಾವ ತುಂಬಿತು.
5. ಉತ್ತರಾಧಿಕಾರಿಗಳು ಅಧಿಕಾರಕ್ಕಾಗಿ ಪರಸ್ಪರ ಷಡ್ಯಂತ್ರಗಳನ್ನು ಹೂಡುತ್ತಿದ್ದರು. ಇದರ ಪರಿಣಾಮವಾಗಿ ಮುಸ್ಲಿಮರಲ್ಲಿ ಒಡಕುಂಟಾಯಿತು.
6. ಉಚ್ಚ-ನೀಚತೆಯು ಮುಸ್ಲಿಮರಲ್ಲೂ ಪ್ರಭಾವ ಬೀರಲಾರಂಭಿಸಿತು. ಸಹೋದರತೆ ಮತ್ತು ಸಮಾನತೆ ಮಾಯವಾಯಿತು.
7. ತಮ್ಮ ಹಿರಿಯರ ಕಠಿಣ ಪರಿಶ್ರಮದಿಂದ ಲಕ್ಷಾಂತರ ಮಂದಿಗೆ ಸತ್ಯಧರ್ಮದ ಪರಿಚಯ, ಅವರ ಬೋಧನೆ, ಸಂಸ್ಕರಣಾ ಚಟುವಟಿಕೆ ಮತ್ತು ಸಾಮೀಪ್ಯದಿಂದಾಗಿ ಅನೇಕರು ತಮ್ಮ ಜೀವನವನ್ನು ಸುಧಾರಿಸಿಕೊಂಡಿದ್ದರು. ಆದರೆ ಆ ಮಹಾನುಭಾವರ ಉತ್ತರಾಧಿಕಾರಿಗಳು ಆ ಚಟುವಟಿಕೆಯನ್ನು ಮುಂದುವರಿಸಲಿಲ್ಲ. ಅವರಲ್ಲಿ ಸಂದೇಶ ಪ್ರಚಾರದ ಕಳಕಳಿಯು ಇಲ್ಲವಾಯಿತು. ಅವರು ಹಿರಿಯರ ಹೆಸರಿನಲ್ಲಿ ಗೋರಿಗಳನ್ನು ಶೃಂಗರಿಸಿ ಲೌಕಿಕ ಲಾಭ ಪಡೆಯತೊಡಗಿದರು. ಕೆಲವು ಸ್ಥಳಗಳು ನವೀನಾಚಾರಗಳ, ಇಸ್ಲಾಮ್ ವಿರೋಧಿ ಶಿಕ್ಷಣಗಳ ಪ್ರಚಾರ ಕೇಂದ್ರಗಳಾದವು.

ಈ ಎಲ್ಲಾ ಕೆಡುಕುಗಳಿಂದಾಗಿ ಮುಸ್ಲಿಮರು ಧಾರ್ಮಿಕವಾಗಿಯೂ, ಭೌತಿಕವಾಗಿಯೂ ಬಹಳ ಹಿಂದುಳಿದರು. ಕೆಲವರು ಸುಧಾರಣೆಯ ಬಗ್ಗೆ ಚಿಂತಿಸಿದರು. ಅದರಲ್ಲಿ ಮುಹಮ್ಮದ್

ತುಗಲಕ್ ಮೊದಲಿಗನು. ಆದರೆ ಕೆಡುಕು ವ್ಯಾಪಕವಾಗಿತ್ತು ಮತ್ತು ಸಮಾಜದ ಪ್ರಭಾವಶಾಲಿ ವ್ಯಕ್ತಿಗಳು ಸುಧಾರಣೆಯ ಕುರಿತು ಚಿಂತಿಸುತ್ತಿರಲಿಲ್ಲ. ಮುಹಮ್ಮದ್ ತುಗಲಕ್ ತನ್ನ ಕೈಲಾದ ಪ್ರಯತ್ನ ಮಾಡಿದನು. ಆತನ ಮರಣದೊಂದಿಗೆ ಎಲ್ಲ ಪ್ರಯತ್ನಗಳೂ ಕೊನೆಗೊಂಡವು. ಇದೇ ಸಂದರ್ಭದಲ್ಲಿ ಮುಸ್ಲಿಮರ ಕಣ್ಣು ತೆರೆಸಲು ತೈಮೂರನು ಭಾರತವನ್ನು ಆಕ್ರಮಿಸಿದನು ಮತ್ತು ದೆಹಲಿಯ ಸಾಮ್ರಾಜ್ಯವನ್ನು ಬುಡಮೇಲು ಮಾಡಿದನು.

## ಐತಿಹಾಸಿಕ ಘಟನೆಗಳ ವರ್ಷಗಳು

ಕ್ರಿ.ಪೂ. 3000 - ಹರಪ್ಪಾ, ಮೊಹೆಂಜದಾರೋ ನಾಗರಿಕತೆಯ ಉತ್ತುಂಗತೆ.

ಕ್ರಿ.ಪೂ. 2500 - ಭಾರತದ ಮೇಲೆ ಆರ್ಯರ ಮೊದಲ ಆಕ್ರಮಣ ಹಾಗೂ ಹರಪ್ಪಾ ಮತ್ತು ಮೊಹೆಂಜದಾರೋ ನಾಗರಿಕತೆಯ ಪತನ.

ಕ್ರಿ.ಪೂ. 1200 - ಭಾರತದ ವಿವಿಧ ಭಾಗಗಳಲ್ಲಿ ಆರ್ಯರ ಆಡಳಿತ ಸ್ಥಾಪನೆ.

ಕ್ರಿ.ಪೂ. 1000 - ಶೂರರ ಯುಗ, ರಾಮಾಯಣ ಮತ್ತು ಮಹಾಭಾರತದ ಯುಗ.

ಕ್ರಿ.ಪೂ. 623 - ಬೌದ್ಧ ಮತ ಸ್ಥಾಪಕನಾದ ಗೌತಮ ಬುದ್ಧನ ಜನನ.

ಕ್ರಿ.ಪೂ. 599 - ಜೈನ ಧರ್ಮದ ಸ್ಥಾಪಕನಾದ ಮಹಾವೀರನ ಜನನ.

ಕ್ರಿ.ಪೂ. 543 - ಗೌತಮ ಬುದ್ಧನ ನಿಧನ.

ಕ್ರಿ.ಪೂ. 527 - ಮಹಾವೀರನ ನಿಧನ.

ಕ್ರಿ.ಪೂ. 327 - ಗ್ರೀಸ್‌ನ ಅಲೆಕ್ಸಾಂಡರನು ಭಾರತವನ್ನು ಆಕ್ರಮಿಸಿದನು.

ಕ್ರಿ.ಪೂ. 321 - ಚಂದ್ರಗುಪ್ತಮೌರ್ಯನು 'ಮೌರ್ಯ' ಮನೆತನದ ಆಡಳಿತ ಸ್ಥಾಪಿಸಿದನು.

ಕ್ರಿ.ಪೂ. 305 - ಗ್ರೀಸ್‌ನ ಸೆಲೂಕಸನು ಚಂದ್ರಗುಪ್ತನ ಮೇಲೆ ಆಕ್ರಮಣ ನಡೆಸಿ ಪರಾಜಯ ಹೊಂದಿದನು. ಮೆಗಸ್ತನೀಸ್ ಎಂಬ ಗ್ರೀಸ್‌ನ ಪ್ರವಾಸಿಗ ಚಂದ್ರಗುಪ್ತನ ಆಸ್ಥಾನಕ್ಕೆ ಬಂದನು.

ಕ್ರಿ.ಪೂ. 272 - ತನ್ನ ಅನೇಕ ಸಹೋದರರನ್ನು ಕೊಲೆ ಮಾಡಿ ಅಶೋಕನು ಪಟ್ಟವೇರಿದನು.

ಕ್ರಿ.ಪೂ. 261 - ಅಶೋಕನಿಂದ ಕಳಿಂಗದ ಮೇಲೆ ಆಕ್ರಮಣ. ಯುದ್ಧದಲ್ಲಿ ಸಂಭವಿಸಿದ ಅಪಾರ ಸಾವು-ನೋವಿನಿಂದ ಮನಕರಗಿ ಅವನಿಂದ ಬೌದ್ಧ ಧರ್ಮ ಸ್ವೀಕಾರ.

ಕ್ರಿ.ಪೂ. 232 - ಅಶೋಕನ ಮರಣ.

ಪ್ರವಾದಿ ಈಸಾರ(ಅ) ಜನನ.

ಕ್ರಿ.ಶ. 120 - ಕನಿಷ್ಕನು ಆಡಳಿತಾರೂಢನಾದನು.

ಕ್ರಿ.ಶ. 149 - ಕನಿಷ್ಕನ ಮರಣ.

ಕ್ರಿ.ಶ. 320 - ಚಂದ್ರಗುಪ್ತ ಮೌರ್ಯನು 'ಗುಪ್ತ' ಮನೆತನದ ಆಡಳಿತ ಪ್ರಾರಂಭಿಸಿದನು.

ಕ್ರಿ.ಶ. 335 - ಚಂದ್ರಗುಪ್ತಮೌರ್ಯನ ನಿಧನ ಮತ್ತು ಸಮುದ್ರಗುಪ್ತನಿಗೆ ಪಟ್ಟ.
ಕ್ರಿ.ಶ. 375 - ಸಮುದ್ರಗುಪ್ತನ ನಿಧನ ಮತ್ತು ವಿಕ್ರಮಾದಿತ್ಯನ ಆಡಳಿತ.
ಕ್ರಿ.ಶ. 405-411 - ಚೀನಾದ ಪ್ರವಾಸಿಗ ಫಾಹಿಯಾನ್ ಭಾರತದಲ್ಲಿ.
ಕ್ರಿ.ಶ. 413 - ವಿಕ್ರಮಾದಿತ್ಯನ ಮರಣ.
ಕ್ರಿ.ಶ. 571 - ಪ್ರವಾದಿ ಮುಹಮ್ಮದರ(ಸ) ಜನನ.
ಕ್ರಿ.ಶ. 610 - ಮುಹಮ್ಮದರಿಗೆ(ಸ) ಪ್ರವಾದಿತ್ವ.
ಕ್ರಿ.ಶ. 622 - ಮಕ್ಕಾದಿಂದ ಮದೀನಾಕ್ಕೆ ಹಿಜ್ರತ್(ವಲಸೆ).
ಕ್ರಿ.ಶ. 632 - ಪ್ರವಾದಿ ಮುಹಮ್ಮದರ(ಸ) ನಿಧನ.
ಕ್ರಿ.ಶ. 606-647 - ಹರ್ಷವರ್ಧನ.
ಕ್ರಿ.ಶ. 630-645 - ಚೀನಾದ ಪ್ರವಾಸಿಗ ಹ್ಯೂಯೆನ್‌ತ್ಸಾಂಗ್ ಭಾರತದಲ್ಲಿ.
ಕ್ರಿ.ಶ. 634 - ಪ್ರಥಮ ಖಲೀಫ ಅಬೂಬಕ್ಕರ್‌ರ(ರ) ನಿಧನ.
ಕ್ರಿ.ಶ. 645 - ಎರಡನೆಯ ಖಲೀಫ ಉಮರ್(ರ) ಹುತಾತ್ಮರಾದರು.
ಕ್ರಿ.ಶ. 654 - ಮೂರನೆಯ ಖಲೀಫ ಉಸ್ಮಾನ್(ರ) ಹುತಾತ್ಮರಾದರು.
ಕ್ರಿ.ಶ. 661 - ನಾಲ್ಕನೆಯ ಖಲೀಫ ಅಲೀ(ರ) ಹುತಾತ್ಮರಾದರು.
ಕ್ರಿ.ಶ. 711 - ಸ್ಪೈಯಿನ್ ಮತ್ತು ಪೋರ್ಚುಗಲ್‌ಗಳ ಮೇಲೆ ತಾರಿಕ್ ಬಿನ್ ಝಿಯಾದ್‌ನ ದಾಳಿ ಮತ್ತು ಜಯ.
ಕ್ರಿ.ಶ. 712 - ಸಿಂಧ್ ಪ್ರಾಂತ್ಯದ ಮೇಲೆ ಮುಹಮ್ಮದ್ ಬಿನ್ ಕಾಸಿಮ್‌ನ ದಾಳಿ.
ಕ್ರಿ.ಶ. 997 - ಮಹ್ಮೂದ್ ಘಝ್ನವಿಯ ಸಿಂಹಾಸನಾರೋಹಣ.
ಕ್ರಿ.ಶ. 1025 - ಮಹ್ಮೂದ್ ಘಝ್ನವಿಯ ಸೋಮನಾಥದ ಮೇಲೆ ದಾಳಿ.
ಕ್ರಿ.ಶ. 1030 - ಮಹ್ಮೂದ್ ಘಝ್ನವಿಯ ನಿಧನ.
ಕ್ರಿ.ಶ. 1192 - ಮುಹಮ್ಮದ್ ಘೋರಿ ಮತ್ತು ಪೃಥ್ವಿರಾಜನ ನಡುವೆ ಯುದ್ಧ.
ಕ್ರಿ.ಶ. 1206 - ದೆಹಲಿ ಸಾಮ್ರಾಜ್ಯವು ಮುಸ್ಲಿಮರ ಕೈವಶವಾಯಿತು. ಕುತುಬುದ್ದೀನ್ ಐಬಕ್ ಎಂಬ ಗುಲಾಮನು ಚಕ್ರವರ್ತಿಯಾದನು.
ಕ್ರಿ.ಶ. 1210 - ಕುತುಬುದ್ದೀನನ ನಿಧನ ಮತ್ತು ಅಲ್ತಮಿಷನಿಗೆ ಪಟ್ಟಾಭಿಷೇಕ.
ಕ್ರಿ.ಶ. 1228 - ಅಂದಿನ ಖಲೀಫರಿಂದ ರಹದಾರಿ ಪಡೆದು ನಿಯೋಗವೊಂದರ ದೆಹಲಿ ಆಗಮನ.
ಕ್ರಿ.ಶ. 1236 - ಅಲ್ತಮಿಷ್ ಮತ್ತು ಖ್ವಾಜಾ ಮುಈನುದ್ದೀನ್ ಚಿಶ್ತಿಯ ನಿಧನ.
ಕ್ರಿ.ಶ. 1246 - ನಾಸಿರುದ್ದೀನನು ಸಿಂಹಾಸನಾರೂಢನಾದನು ಮತ್ತು ಬಲ್ಬನನು ಆತನ ಮಂತ್ರಿಯಾದನು.
ಕ್ರಿ.ಶ. 1266 - ನಾಸಿರುದ್ದೀನನ ನಿಧನ ಮತ್ತು ಬಲ್ಬನನಿಗೆ ಆಳ್ವಿಕೆ.
ಕ್ರಿ.ಶ. 1285 - ಯುವರಾಜ ಮುಹಮ್ಮದ್ ಮೊಗಲರಿಂದ ಹತ್ಯೆಗೈಯಲ್ಪಟ್ಟನು.
ಕ್ರಿ.ಶ. 1286 - ಬಲ್ಬನನ ನಿಧನ.

ಕ್ರಿ.ಶ. 1290 - ಜಲಾಲುದ್ದೀನ್ ಖಿಲ್ಜಿಯ ಪೀಠಾರೋಹಣ. ಖಿಲ್ಜಿ ಮನೆತನದ ಸಾಮ್ರಾಜ್ಯ ಆರಂಭ.

ಕ್ರಿ.ಶ. 1295 - ಉಪವಾಸಿಗನಾದ ಜಲಾಲುದ್ದೀನನನ್ನು ಕೊಂದು ಅಲ್ಲಾವುದ್ದೀನನು ಅಧಿಕಾರಕ್ಕೆ ಬಂದನು.

ಕ್ರಿ.ಶ. 1316 - ಅಲ್ಲಾವುದ್ದೀನನ ನಿಧನ, ಮುಬಾರಕ್ ಖಿಲ್ಜಿಗೆ ಪಟ್ಟ.

ಕ್ರಿ.ಶ. 1320 - ಖಿಲ್ಜಿ ಮನೆತನದ ಅಂತ್ಯ. ಗಿಯಾಸುದ್ದೀನ್ ತುಗ್‌ಲಕ್ ಅಧಿಕಾರಕ್ಕೆ.

ಕ್ರಿ.ಶ. 1325 - ಗಿಯಾಸುದ್ದೀನ್, ನಿಝಾಮುದ್ದೀನ್ ಔಲಿಯಾ, ಅಮೀರ್ ಖುಸ್ರೋರ ನಿಧನ

ಕ್ರಿ.ಶ. 1333-42 - ಇಬ್ನು ಬತೂತನು ದೆಹಲಿಗೆ ಬಂದನು.

ಕ್ರಿ.ಶ. 1351 - ಮುಹಮ್ಮದ್ ತುಗಲಕನ ನಿಧನ ಮತ್ತು ಫೈರೋಝ್ ತುಗಲಕ್ ಅಧಿಕಾರಕ್ಕೆ.

ಕ್ರಿ.ಶ. 1387 - ಫೈರೋಝ್ ತುಗಲಕನ ನಿಧನ.

## ಪ್ರಶ್ನೆಗಳು

1. ದ್ರಾವಿಡರು ಯಾರು? ಅವರು ದೇಶದ ಯಾವ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದರು? ನಂತರ ಅವರಲ್ಲಿ ಯಾವ ಕೆಡುಕುಗಳು ಹುಟ್ಟಿಕೊಂಡವು? ಮತ್ತು ಅದರ ಪರಿಣಾಮವೇನಾಯಿತು?
2. ಆರ್ಯರ ಬಗ್ಗೆ ನೀವೇನು ತಿಳಿದಿದ್ದೀರಿ? ಅವರ ವೈಶಿಷ್ಟ್ಯತೆ ಮತ್ತು ಸಾಧನೆಗಳೇನು?
3. ಆರ್ಯರಲ್ಲಿ ಬರಬರುತ್ತಾ ಯಾವ ಕೆಡುಕುಗಳು ಕಂಡು ಬಂದುವು ಮತ್ತು ಅದರ ಪರಿಣಾಮವೇನಾಯಿತು?
4. ಪುರಾತನ ಇತಿಹಾಸದ ಮೂಲಗಳಾವುವು? ಅದರಲ್ಲಿ ಎಷ್ಟರ ಮಟ್ಟಿಗೆ ಭರವಸೆಯಿಡಬಹುದು?
5. ಹೊರಗಿನಿಂದ ಬಂದ ಮುಸ್ಲಿಮರಲ್ಲಿ ಯಾವ ತರದ ಜನರಿದ್ದರು?
6. ಅರಬ್ ವ್ಯಾಪಾರಿಗಳು ಹಾಗೂ ದಿಗ್ವಿಜಯಿಗಳ ಗುಣಗಳು ಮತ್ತು ಸಾಧನೆಗಳ ಬಗ್ಗೆ ಬೆಳಕು ಚೆಲ್ಲಿ?
7. ಇಸ್ಲಾಮಿನ ಪ್ರಚಾರಕರು ದೇಶಕ್ಕೆ ಯಾವ ಭಾಗ್ಯ ಒದಗಿಸಿದರು?
8. ತುರ್ಕ್ ಮತ್ತು ಅರಬ್ ದಿಗ್ವಿಜಯಿಗಳ ತುಲನೆ ಮಾಡಿರಿ?
9. ಆರಂಭಕಾಲದ ಮುಸ್ಲಿಮರು ಇಲ್ಲಿನ ಜನರ ಮೇಲೆ ಯಾವ ಪರಿಣಾಮ ಬೀರಿದರು?
10. 'ಭಕ್ತಿಮತ' ಎಂದರೇನು? ಅದರ ಮೂಲಭೂತ ಶಿಕ್ಷಣದ ಬಗ್ಗೆ ಬೆಳಕು ಚೆಲ್ಲಿ.
11. 'ಭಕ್ತಿ ಮತ'ದಿಂದಾದ ಪರಿಣಾಮವೇನು?
12. ಮುಸ್ಲಿಮರ ಮೇಲೆ ಇಲ್ಲಿನ ಜನರ ಪ್ರಭಾವವೇನು?

◀❋▶

# ಅಧ್ಯಾಯ - 2

## ತೈಮೂರ್‌ಲಂಗ್‌ನ ಕೊಲೆಪಾತಕ - ಕ್ರಿ.ಶ.1398

ಅನ್ಯಾಯವಾಗಿ ಮನುಷ್ಯರ ರಕ್ತಹರಿಸುವ ಕಿರಾತರು ಎಲ್ಲಾ ಕಾಲಗಳಲ್ಲೂ ಇದ್ದರು. ಅಂತಹವರ ಪಟ್ಟಿಯಲ್ಲಿ ಬುಕ್ತ್‌ನಸರ್, ಚಂಗೀಸ್‌ಖಾನ್, ಹಲಾಕೊ, ತೈಮೂರ್‌ಲಂಗ್ ಮೊದಲಿಗರು. ಇವರಲ್ಲಿ ಮೊದಲ ಮೂವರು ದೇವ ಧಿಕ್ಕಾರಿಗಳು ಮತ್ತು ಸತ್ಯದ ವಿರೋಧಿಗಳಾಗಿದ್ದರು. ಅಂತಹವರ ಕೈಯಲ್ಲಿ ಮಾನವ ಸಂಹಾರ ನಡೆದರೆ ಅಚ್ಚರಿಯೇನಲ್ಲ. ಆದರೆ ತೈಮೂರನು ಇಸ್ಲಾಮ್ ಧರ್ಮದ ಅನುಯಾಯಿಯೆಂದು ವಾದಿಸುತ್ತಿದ್ದನು. ಇಸ್ಲಾಮ್ ಧರ್ಮವಾದರೋ ಜಗತ್ತಿನಲ್ಲಿ ಶಾಂತಿಯ ಸ್ಥಾಪನೆ ಮತ್ತು ಇಹ-ಪರ ವಿಜಯದ ಸಾಧನವಾಗಿದೆ. ತೈಮೂರನು ತನ್ನ ಕೊಲೆಪಾತಕಕ್ಕೆ 'ಜಿಹಾದ್' ಎಂಬ ಪವಿತ್ರ ಹೆಸರಿಟ್ಟಿದ್ದನು ಮತ್ತು ಈ ವಾದವನ್ನು ಸಾಬೀತುಪಡಿಸಲು ಜಿಹಾದ್‌ನ 'ಫತ್ವಾ'ವನ್ನು ಪಡಕೊಂಡಿದ್ದನು. ಅದನ್ನು ಆತನು ತನ್ನ ಪತಾಕೆಯಲ್ಲಿ ಬಿಡಿಸಿ ಸುತ್ತುತ್ತಿದ್ದನು. ಆತನು ತನ್ನನ್ನು ತಾನೇ ಮಹಾಸುಧಾರಕ (ಮುಜದ್ದಿದ್)ನೆಂದು ತಿಳಿದುಕೊಂಡಿದ್ದನು.

## ತೈಮೂರನ ಆರಂಭಕಾಲ

ತೈಮೂರನು 1336ರಲ್ಲಿ ಸಮರ್‌ಕಂದ್‌ನ ಸಮೀಪದ ಒಂದು ಹಳ್ಳಿಯಲ್ಲಿ ಜನಿಸಿದನು. ಮೂಲದಲ್ಲಿ ಆತನು ತುರ್ಕಿಯವನಾಗಿದ್ದನು. ಆತನ ತಂದೆ ತುರ್ಕರ ಪ್ರಸಿದ್ಧ ಮನೆತನ 'ಬರ್ಲಾಸ್'ಗೆ ಸೇರಿದವರಾಗಿದ್ದರು. ತಾಯಿ ಚಂಗೀಸ್‌ಖಾನ್‌ನ ಸಂಬಂಧಿಯಾಗಿದ್ದಳು. ತೈಮೂರನು ತನ್ನನ್ನು ಮೊಗಲನೆಂದು ಕರೆಸಿಕೊಳ್ಳಲು ಇಷ್ಟಪಡುತ್ತಿದ್ದನು ಮತ್ತು ಚಂಗೀಸ್‌ಖಾನ್‌ನ ಸಂಬಂಧಿ ಎನ್ನಲು ಅಂಜುತ್ತಿದ್ದನು. ಏಕೆಂದರೆ ಚಂಗೀಸ್‌ಖಾನ್, ಬಲಿಷ್ಠ ಮೊಗಲ್ ಸೈನಿಕರ ಸಹಾಯದಿಂದ ಕೊಲೆಪಾತಕ ನಡೆಸಿ ಮಧ್ಯ ಏಷ್ಯಾದಲ್ಲಿ ಒಂದು ದೊಡ್ಡ ಸಾಮ್ರಾಜ್ಯವನ್ನು ಸ್ಥಾಪಿಸಿದ್ದನು. ಆದರೆ ತೈಮೂರನು ಕಣ್ಣುತೆರೆಯುವಾಗ ಚಂಗೀಸ್‌ಖಾನನ ಕುಟುಂಬವು ಅವನತಿ ಹೊಂದಿತ್ತು. ತೈಮೂರನು ಪರಿಸ್ಥಿತಿಯ ಲಾಭ ಪಡೆದು ಮೂವತ್ತಮೂರನೆಯ ವಯಸ್ಸಿನಲ್ಲಿ ಸಮರ್‌ಕಂದ್‌ನ ಆಡಳಿತವನ್ನು ವಶ ಪಡಿಸಿದನು. ಮೆಲ್ಲಮೆಲ್ಲನೆ ಒಂದು ಬಲಿಷ್ಠ ಸೈನ್ಯವನ್ನು ಕಟ್ಟಿ ಮಧ್ಯಪ್ರಾಚ್ಯದ ಮುಸ್ಲಿಮ್ ರಾಷ್ಟ್ರಗಳ ವಿರುದ್ಧ ದಂಗೆಯೆದ್ದನು. ಆ ಹೊತ್ತಿನಲ್ಲಿ ಮುಸ್ಲಿಮ್ ಆಡಳಿತಗಾರರ ಸ್ಥಿತಿಯು

ಶೋಚನೀಯವಾಗಿತ್ತು. ಅವರು ವಿಲಾಸೀ ಜೀವನದಲ್ಲಿ ಮುಳುಗಿ ತಮ್ಮ ಕರ್ತವ್ಯಗಳನ್ನು ಮರೆತಿದ್ದರು. ಪ್ರಜೆಗಳೂ ಧರ್ಮದಿಂದ ದೂರ ಸರಿದು ಸ್ವೇಚ್ಛೆಯ ಗುಲಾಮರಾಗಿದ್ದರು. ಆದುದರಿಂದ ಅಲ್ಲಾಹನ ಹಿಡಿತ ಎಂಬಂತೆ ತೈಮೂರನು ಅವರನ್ನು ಆಕ್ರಮಿಸಿದನು. ಅವರ ಸಂಪತ್ತು ಮತ್ತು ಸಾಮಗ್ರಿಗಳನ್ನು ಲೂಟಿಮಾಡಿದನು. ಜನರಲ್ಲಿ ಭೀತಿ ಹುಟ್ಟಿಸಿದನು. ಅಂಗಡಿ, ಮನೆ, ಬಂಗಲೆಗಳಿಗೆ ಕೊಳ್ಳಿಯಿಟ್ಟನು. ಹೆಣ್ಣು - ಗಂಡು, ಮಕ್ಕಳು - ಮುದುಕರೆಂಬ ಭೇದವಿಲ್ಲದೆ ಲಕ್ಷಗಟ್ಟಲೆ ಜನರನ್ನು ಒಂದುಕಡೆ ಸೇರಿಸಿ ನಿರ್ದಾಕ್ಷಿಣ್ಯವಾಗಿ ಕೊಲೆಮಾಡಿಸಿದನು.

## ಭಾರತದ ಮೇಲೆ ಆಕ್ರಮಣ

ಪಶ್ಚಿಮದಲ್ಲಿ ರೋಮ್‌ನ ಸಾಗರದ ವರೆಗೆ ತನ್ನ ಸಾಮ್ರಾಜ್ಯವನ್ನು ವಿಸ್ತಾರ ಗೊಳಿಸಿದ ಬಳಿಕ, ತೈಮೂರನು ತನ್ನ ಅರುವತ್ತೊಂಭತ್ತನೇ ವಯಸ್ಸಿನಲ್ಲಿ ಭಾರತದ ಕಡೆ ತಿರುಗಿದನು. ಭಾರತದಲ್ಲಿದ್ದ ಮೊಗಲರ ಮೇಲೆ ಹೊರಗಿನ ಆಕ್ರಮಣ ಹೊಸತೇನಲ್ಲ. ಇದಕ್ಕೂ ಮೊದಲು ಚೆಂಗೀಸ್‌ಖಾನ್ ಮುಸ್ಲಿಮರಾದ ಮೊಗಲರನ್ನು ದ್ವೇಷಿಸುತ್ತಿದ್ದನು ಮತ್ತು ಅನೇಕ ಬಾರಿ ದಾಳಿ ಮಾಡಿದ್ದನು. ಆದರೆ ಮೊಗಲ್ ಸರದಾರರ ಛಲ ಮತ್ತು ಧೈರ್ಯದಿಂದಾಗಿ ಪ್ರತಿಬಾರಿಯೂ ಆತನು ನಿರಾಶನಾಗಬೇಕಾಯಿತು. ಇದರಿಂದಾಗಿ ತೈಮೂರನಿಗೆ ಭಾರತೀಯ ಸೈನಿಕರಲ್ಲಿ ಭಯವಿತ್ತು. ದೆಹಲಿಯ ಸರದಾರರು, ಶತಮಾನಗಳ ವರೆಗೆ ವಿದೇಶಿಯರ ಆಕ್ರಮಣಗಳಿಂದ ಈ ದೇಶವನ್ನು ರಕ್ಷಿಸಿದುದು ಭಾರತೀಯರ ಮೇಲೆ ಮಾಡಿದ ಮಹಾ ಉಪಕಾರವಾಗಿದೆ.

ಮೊಗಲ್ ಸರದಾರನಾದ ಬಲ್‌ಬನನಿಗೆ ಈ ಹೋರಾಟದಲ್ಲಿ ತನ್ನ ಪ್ರೀತಿಯ ಮಗನಾದ ಯುವರಾಜ ಮುಹಮ್ಮದನನ್ನು ಕಳಕೊಳ್ಳಬೇಕಾಯಿತು. ಬಲ್‌ಬನನು ಮುಹಮ್ಮದ್ ತುಗಲಕನ ಕಾಲದಲ್ಲಿ ಇಸ್ಲಾಮ್‌ಧರ್ಮ ಸ್ವೀಕರಿಸಿದ್ದನು. ಮುಹಮ್ಮದ್ ತುಗಲಕನ ಉತ್ತರಾಧಿಕಾರಿಯಾದ ಫೈರೋಝ್ ತುಗಲಕನ ಅನರ್ಹತೆ, ಸಮುದಾಯದ ಒಳಜಗಳ ಮತ್ತು ಪ್ರಾಂತ್ಯದ ಮುಖಂಡರುಗಳ ಸ್ವಾತಂತ್ರ್ಯದ ಬೇಡಿಕೆಗಳ ವಿಷಯ ತಿಳಿದು ತೈಮೂರನು ಭಾರತದ ಮೇಲೆ ದಾಳಿ ಮಾಡಲು ಧೈರ್ಯ ತೋರಿದನು. ಆತನು ತನ್ನ ಸೈನಿಕರೊಂದಿಗೆ ತನ್ನ ಇಚ್ಛೆಯನ್ನು ಪ್ರಕಟಿಸಿದನು. ಅವರು ಭಾರತದ ಪರಿಸ್ಥಿತಿಯ ಕುರಿತು ವಿವರಿಸಿದಾಗ ಅವರು ದಾಳಿ ನಡೆಸಲು ತಯಾರಾದರು. ಮೊದಲು ಅಫ್ಘಾನ್ ಗಡಿಭಾಗದಲ್ಲಿ ಮೂಸಾಖಾನ್‌ನ ಜೊತೆ ಸಂಘರ್ಷವಾಯಿತು. ಅಲ್ಲಿಗೆ ತೈಮೂರನು ತನ್ನ ಒಬ್ಬ ಸೇನಾನಾಯಕನನ್ನು ನೇಮಿಸಿದ್ದನು. ಆದರೆ ಸಂಘರ್ಷದಲ್ಲಿ ಸೇನಾ ನಾಯಕನು ಹತನಾದನು. ತೈಮೂರನ ಸೈನ್ಯವು ಹೆದರಿ ಹಿಂದಿರುಗಿತು. ಈ ಸಂದರ್ಭದಲ್ಲಿ ತೈಮೂರನು ಒಂದು ಕುತಂತ್ರ ಹೂಡಿದನು. ಯುದ್ಧದಲ್ಲಿ ಭಾಗವಹಿಸಿ ಮಡಿದ ಆ ಸೇನಾನಾಯಕನ ಸೋದರನನ್ನು ಬಂಧಿಸಿದನು ಮತ್ತು ಮೂಸಾಖಾನ್ ನಮ್ಮ ಸ್ನೇಹಿತ, ಇವರು ನನ್ನ ಅನುಮತಿಯಿಲ್ಲದೆ ನಿಮ್ಮ ಮೇಲೆ ದಾಳಿ ಮಾಡಿದ್ದಾರೆ ಎಂದು ನಂಬಿಸಿದನು. ಮೂಸಾಖಾನ್ ಈ ನಾಟಕವನ್ನು ನಂಬಿ ತೈಮೂರನನ್ನು ಖುದ್ದಾಗಿ ಕಾಣಲು ಆತನ ಬಳಿ ತೆರಳಿದನು.

ಆದರೆ ತೈಮೂರನು ದ್ರೋಹವೆಸಗಿ ತನ್ನ ಅತಿಥಿಯನ್ನು ಕೊಲೆಗೈದನು ಮತ್ತು ಆತನ ಸಾಮ್ರಾಜ್ಯವನ್ನು ವಶಪಡಿಸಿದನು. ತೈಮೂರನು ತನ್ನ ಆಕ್ರಮಣವನ್ನು ಮುಂದುವರಿಸುತ್ತಾ, ತನ್ನ ಮೊಮ್ಮಗನಾದ ಪೀರ್ ಮುಹಮ್ಮದನನ್ನು ಮೂವತ್ತು ಸಾವಿರ ಸೈನಿಕರೊಂದಿಗೆ ಬೋಲಾನ್ ಕಣಿವೆಯ ಕಡೆಯಿಂದ ರವಾನಿಸಿದನು. ಅವರು ಪಠಾಣದ ವಿವಿಧ ಗೋತ್ರ ಗಳೊಂದಿಗೆ ಹೋರಾಡುತ್ತಾ ಮುಲ್ತಾನ್‌ಗೆ ತಲುಪಿದನು ಮತ್ತು ಅಲ್ಲಿನ ಆಡಳಿತಗಾರನನ್ನು ಸೋಲಿಸಿ ಪಟ್ಟಣವನ್ನು ವಶಪಡಿಸಿದನು. ಇತ್ತ ಸ್ವತಃ ತೈಮೂರನು ಒಂದು ಲಕ್ಷ ಸಶಸ್ತ್ರ ಸೈನಿಕರೊಂದಿಗೆ ಖೈಬರ್ ಕಣಿವೆಯ ಮೂಲಕವಾಗಿ ಪಂಜಾಬನ್ನು ಪ್ರವೇಶಿಸಿದನು. ಲೂಟಿ ಮತ್ತು ಕೊಲೆ ಮಾಡುತ್ತಾ ಲಾಹೋರ್‌ಗೆ ತಲುಪಿದನು. ಲಾಹೋರಿನ ಸರದಾರ ಧೈರ್ಯ ದಿಂದ ಆತನನ್ನು ಎದುರಿಸಿದನು. ಆದರೆ ತೈಮೂರನ ಬಲಿಷ್ಠ ಸೈನ್ಯಕ್ಕೆ ಆತನನ್ನು ಸೋಲಿಸಲು ಹೆಚ್ಚೇನೂ ಕಷ್ಟವಾಗಲಿಲ್ಲ. ಹೀಗೆ ಲಾಹೋರ್ ತೈಮೂರನ ವಶವಾಯಿತು. ಇದೇ ಸಂದರ್ಭದಲ್ಲಿ ದೆಹಲಿ ಸಾಮ್ರಾಜ್ಯದ ಕೆಲವು ಪ್ರಭಾವಿ ಬಂಡಾಯಗಾರರು ತಮ್ಮ ಬೆಂಬಲವನ್ನು ತೈಮೂರನಿಗೆ ನೀಡಿದರು ಮತ್ತು ತಮ್ಮನ್ನು ತೈಮೂರನ ಸೇವೆಯಲ್ಲಿ ತೊಡಗಿಸಿದರು. ತೈಮೂರನು ಈ ಅಧಿಕಾರಮೋಹಿ ಬಂಡಾಯಗಾರರಿಗೆ ಕೆಲವು ಭಾಗಗಳ ಆಡಳಿತವನ್ನು ನೀಡಿ, ಆಕ್ರಮಣ ಮುಂದುವರಿಸುತ್ತಾ ಮುಲ್ತಾನ್‌ಗೆ ತಲುಪಿದನು. ಅಲ್ಲಿ ಆಗಲೇ ತನ್ನ ಮೊಮ್ಮಗನಾದ ಪೀರ್ ಮುಹಮ್ಮದ್ ಉಪಸ್ಥಿತನಿದ್ದನು. ಅಲ್ಲಿಂದ ಅವರಿಬ್ಬರು ಸೈನ್ಯವನ್ನು ಒಗ್ಗೂಡಿಸಿ ಭಟ್‌ನೈರ್‌ಗೆ ಸಮೀಪದ ಪ್ರಸಿದ್ಧ ಕೋಟೆಯನ್ನು ಪುಡಿಗಟ್ಟಿದರು ಮತ್ತು ಪಟ್ಟಣವನ್ನೂ ನಾಶಗೊಳಿಸಿದರು.

## ದೆಹಲಿಯಲ್ಲಿ ತೈಮೂರ್

ತೈಮೂರನು ತನ್ನ ದಾಳಿಯನ್ನು ಮುಂದುವರಿಸಿದನು. ಜನರಲ್ಲಿ ಭೀತಿ ಹುಟ್ಟಿಸುತ್ತಾ, ಪುರುಷರನ್ನೂ ಮಹಿಳೆಯರನ್ನೂ ಗುಲಾಮರನ್ನಾಗಿಸುತ್ತಾ ದೆಹಲಿಯ ಸಮೀಪ ತಲುಪಿದನು. ದೆಹಲಿಯ ಸರದಾರನು ತನ್ನ ಐವತ್ತು ಸಾವಿರ ಸೈನಿಕರೊಂದಿಗೆ ಹೋರಾಟಕ್ಕಾಗಿ ಸಜ್ಜಾದನು. ತೈಮೂರನು ಆಕ್ರಮಣಕ್ಕೆ ಮುಂಚಿತವಾಗಿ ತಾನು ಬಂಧಿಸಿದ್ದ ಲಕ್ಷಗಟ್ಟಲೆ ಜನರನ್ನು ನಿರ್ದಾಕ್ಷಿಣ್ಯವಾಗಿ ಕೊಲೆ ಮಾಡಿಸಿದನು. ಘೋರ ಯುದ್ಧದಲ್ಲಿ ದೆಹಲಿಯ ಸೈನಿಕರು ಸೋತರು. ಮುಹಮ್ಮದ್ ತುಗಲಕನು ಓಡಿಹೋಗಿ ಗುಜರಾತ್‌ನಲ್ಲಿ ಆಶ್ರಯ ಪಡೆದನು. ದೆಹಲಿಯು ತೈಮೂರನ ವಶವಾಯಿತು. ಮೊಗಲ್ ಸೈನಿಕರು ನಗರ ಪ್ರವೇಶಿಸಿ ಲೂಟಿ ಮಾಡ ತೊಡಗಿದರು. ಇದು ಮೊಗಲರಿಗೆ ದೆಹಲಿ ದೋಚುವ ಮೊದಲ ಅವಕಾಶವಾಗಿತ್ತು. ದೆಹಲಿಯು ಅಶಾಂತಿಯ ಕೇಂದ್ರವಾಯಿತು. ನಾಗರಿಕರ ವಿನಂತಿಯ ಮೇರೆಗೆ ತೈಮೂರನು ಅವರ ಜೀವಕ್ಕೆ ರಕ್ಷಣೆ ನೀಡುವ ಭರವಸೆಯಿತ್ತನು. ನಂತರ ಕೆಲವು ವಿಷಯಗಳಲ್ಲಿ ದೆಹಲಿ ರಾಜಮನೆತನದ ಸದಸ್ಯರು ಮತ್ತು ಸೈನಿಕರೊಂದಿಗೆ ಮಾತಿಗೆ ಮಾತು ಬೆಳೆದು ತೈಮೂರನು ಕೋಪಗೊಂಡನು. ಆ ಮೂಲಕ ಆತನಿಗೆ ಕೊಲೆಪಾತಕವೆಸಗಲು ಒಂದು ನೆಪಸಿಕ್ಕಿತು. ಪರಿಣಾಮವಾಗಿ ಮೊಗಲ್ ಸೈನಿಕರು ಮತ್ತು ರಾಜ ಕುಟುಂಬದ ಮೇಲೆರಗಿದನು. ರಾಜಧಾನಿ

ದೆಹಲಿಯಲ್ಲಿ ರಕ್ತದ ಕೋಡಿ ಹರಿಸಿದನು. ಮನೆಗಳು ಮತ್ತು ಬಂಗಲೆಗಳಿಗೆ ಕೊಳ್ಳಿಯಿಟ್ಟನು. ಹೀಗೆ ಸುಂದರ ದೆಹಲಿ ಸಾಮ್ರಾಜ್ಯವನ್ನು ನುಚ್ಚುನೂರು ಮಾಡಿದನು.

## ಹಿಂದಿರುಗಿದ ತೈಮೂರ್

ದೆಹಲಿಯ ಹದಿನೈದು ದಿನಗಳ ಕೊಲೆಪಾತಕದ ಬಳಿಕ ತೈಮೂರನು ಮೀರಠ್‌ನ ದಾರಿ ಹಿಡಿದನು. ಅಲ್ಲಿ ಅವನು ಕೋಟೆಯನ್ನು ಕೆಡವಿ ನಗರವನ್ನು ದೋಚಿದನು. ಸಹಾರನ್‌ಪುರವನ್ನು ಲೂಟಿ ಮಾಡುತ್ತಾ ಬಿದನೂರಿಗೆ ತಲುಪಿದನು. ಜನರಲ್ಲಿ ಭೀತಿ ಹುಟ್ಟಿಸಿದನು. ಹೊರಡುವಾಗ ತನ್ನ ಜೊತೆಗಿದ್ದ ಮುಹಮ್ಮದ್ ತುಗಲಕನ ಬಂಡುಕೋರ ಸರದಾರ ಖಿಝ್ರ್‌ಖಾನನನ್ನು ಪಂಜಾಬ್‌ನ ಆಡಳಿತಾಧಿಕಾರಿಯಾಗಿ ನೇಮಿಸಿ ಕಾಬೂಲ್ ಮುಖಾಂತರ ಸಮರ್‌ಕಂದ್‌ಗೆ ತಲುಪಿದನು. ತೈಮೂರನ ಈ ಅಭಿಯಾನವು ಆರಂಭವಾಗಿ ಒಂದು ವರ್ಷವಾಗಿತ್ತು. ಈ ಅವಧಿಯಲ್ಲಿ ಆತನು ದೇಶದ ಉದ್ದಗಲದಲ್ಲಿ ವಿನಾಶ ಮಾಡಿದ್ದನು. ಹಣ, ಸಂಪತ್ತು, ರತ್ನ, ಚಿನ್ನಾಭರಣಗಳನ್ನು ಭಾರಿ ಪ್ರಮಾಣದಲ್ಲಿ ಕೂಡಿಸಿದ್ದನು. ಜೊತೆಗೆ ಜನರನ್ನು ಖೈದಿಯನ್ನಾಗಿಸಿ ಕರಕೊಂಡು ಹೋದನು. ಅವರ ಸಂಖ್ಯೆ ಆತನ ಒಬ್ಬ ಸಾಮಾನ್ಯ ಸೈನಿಕನಿಗೆ ಸರಾಸರಿ ಇಪ್ಪತ್ತು ದಾಸಿಯರಂತೆ ಇತ್ತು.

ತೈಮೂರನು ಭಾರತ ಬಿಡಲು ಇನ್ನೊಂದು ಕಾರಣವೇನೆಂದರೆ ಕಾನ್‌ಸ್ಟಾಂಟಿನೋಪಲ್‌ನ ಕ್ರೈಸ್ತ ರಾಜನು ಟರ್ಕಿಯ ಉಸ್ಮಾನಿ ಸರದಾರ ಬಾಯಝೀದ್ ಯಲ್‌ದ್ರಮ್‌ನ ವಿರುದ್ಧವಾಗಿ ತೈಮೂರನಿಂದ ಸಹಾಯ ಯಾಚಿಸಿದ್ದನು, ಈ ಬೇಡಿಕೆಯು ತೈಮೂರನು ಭಾರತದಲ್ಲಿದ್ದಾಗ ಇತ್ತು. ಆದುದರಿಂದ ಈ ಅಕ್ರಮಿಯು ಟರ್ಕಿಯ ಉಸ್ಮಾನಿಗಳ ವಿರುದ್ಧ ಕ್ರೈಸ್ತರಿಗೆ ಸಹಾಯ ಮಾಡಿ ತುರ್ಕರನ್ನು ಸೋಲಿಸಿದನು. ಪರಿಣಾಮವಾಗಿ ಯೂರೋಪ್ ಒಂದು ದೀರ್ಘ ಕಾಲದವರೆಗೆ ಇಸ್ಲಾಮಿನ ಬೆಳಕಿನಿಂದ ವಂಚಿತವಾಯಿತು. ಬಾಯಝೀದ್ ಯಲ್‌ದ್ರಮ್ ನಂತಹ ಧರ್ಮಯೋಧರನ್ನು ಬಂಧಿಸಿ ಪ್ರಾಣಿಗಳಂತೆ ವರ್ತಿಸಲಾಯಿತು. ಇದು ತೈಮೂರನ ವಿನಾಶಕಾರಿ ಕೃತ್ಯಗಳು! ಇದನ್ನೇ ಅವನು ಮತ್ತು ಅವನ ಬೆಂಬಲಿಗರು ಜಿಹಾದ್ ಎಂದು ಪರಿಗಣಿಸುತ್ತಿದ್ದರು.

## ಬರಗಾಲ ಮತ್ತು ಸಾಂಕ್ರಾಮಿಕ ರೋಗ

ತೈಮೂರನು ಹಿಂದಿರುಗಿದ ನಂತರ ಉತ್ತರ ಪ್ರದೇಶದ ಪಶ್ಚಿಮದಲ್ಲಿ, ದೆಹಲಿ ಮತ್ತು ಪಂಜಾಬ್‌ನಲ್ಲಿ ಭಾರೀ ಬರಗಾಲ ತಲೆದೋರಿತು. ಅನೇಕರು ಜೀವ ಕಳಕೊಂಡರು. ನಂತರ ಸಾಂಕ್ರಾಮಿಕ ರೋಗವೂ ಪಸರಿಸತೊಡಗಿತು. ಉಳಿದ ಜನರೂ ಆ ರೋಗಕ್ಕೆ ತುತ್ತಾದರು. ಈ ದೇಶದ ಸಂಪತ್ತು, ಸೌಲಭ್ಯಗಳನ್ನು ಅನುಭವಿಸಿ ಕೃತಘ್ನತೆ, ಅವಿಧೇಯತೆ, ಅಕ್ರಮ, ಅತ್ಯಾಚಾರವೆಸಗಿದ ಜನರ ಮೇಲೆ ಅಲ್ಲಾಹನ ಕೋಪವು ತೈಮೂರನ ಆಕ್ರಮಣ, ಬರಗಾಲ ಮತ್ತು ಸಾಂಕ್ರಾಮಿಕ ರೋಗಗಳ ಮೂಲಕ ಎರಗಿತು. ಅಕಟಾ! ಈ ಅವಸ್ಥೆ ಅವರ ನಂತರದವರ ಕಣ್ಣು ತೆರೆಸಿದ್ದರೆ!

## ಪ್ರಶ್ನೆಗಳು

1. ಅನ್ಯಾಯವಾಗಿ ಮಾನವರ ರಕ್ತಹರಿಸಿದವರ ಪಟ್ಟಿಯಲ್ಲಿ ಮೊದಲಿಗರು ಯಾರ್ಯಾರು?
2. ತೈಮೂರನು ಇತರ ಕೊಲೆ ಗಡುಕರಿಗಿಂತ ಏಕೆ ದುಷ್ಟನಾಗಿದ್ದಾನೆ?
3. ತೈಮೂರನ ಆರಂಭಕಾಲದ ಪರಿಸ್ಥಿತಿ ತಿಳಿಸಿರಿ.
4. ಮೂಸಾಖಾನನನ್ನು ಯಾವ ರೀತಿ ಅಧಿಕಾರದಿಂದ ಕೆಳಗಿಳಿಸಲಾಯಿತು?
5. "ತೈಮೂರನ ಆಗಮನವನ್ನು ದೆಹಲಿ ಎಂದಿಗೂ ಮರೆಯಲಾಗದು" ಏಕೆ? ತೈಮೂರನ ಆಕ್ರಮಣದ ವೃತ್ತಾಂತವನ್ನು ವಿವರಿಸಿರಿ.
6. ತೈಮೂರನು ದೆಹಲಿಯನ್ನು ಬೇಗನೆ ಏಕೆ ತೊರೆದನು?
7. ತೈಮೂರನ ಆಕ್ರಮಣದಿಂದ ದೇಶಕ್ಕೆ ಮತ್ತು ಸಮುದಾಯಕ್ಕೆ ಯಾವ ಹಾನಿ ಉಂಟಾಯಿತು?
8. ತೈಮೂರನ ನಂತರ ದೇಶದ ಅವಸ್ಥೆಯೇನಾಯಿತು?
9. ಈ ಕೆಳಗಿನ ಇಸವಿಗಳು ಏಕೆ ಪ್ರಸಿದ್ಧಿ ಪಡೆದಿವೆ?
   712, 1025, 1206, 1228, 1236, 1295, 1325, 1336, 1387, 1398.
10. ಭಾರತದ ನಕ್ಷೆ ಬಿಡಿಸಿ ತೈಮೂರನ ಆಗಮನ ಮತ್ತು ನಿರ್ಗಮನದ ದಾರಿ ತೋರಿಸಿ?

# ಅಧ್ಯಾಯ - 3

## ಸಯ್ಯದ್ ಕುಟುಂಬ: ಕ್ರಿ.ಶ.1414-1451

ತೈಮೂರನ ಆಕ್ರಮಣವು ದೆಹಲಿಯ ಸಾಮ್ರಾಜ್ಯವನ್ನು ಸಂಪೂರ್ಣವಾಗಿ ಕೊನೆಗೊಳಿಸಿತ್ತು. ಯಾವುದೇ ಕೇಂದ್ರ ಆಡಳಿತ ವ್ಯವಸ್ಥೆ ಇಲ್ಲದ ಕಾರಣ ದೇಶದಲ್ಲಿ ಅರಾಜಕತೆ, ಅಶಾಂತಿ ಉಂಟಾಯಿತು. ಮುಹಮ್ಮದ್ ತುಗಲಕ್ ಕೆಲವು ದಿನಗಳ ನಂತರ ಗುಜರಾತ್‌ನಿಂದ ಮರಳಿ ಬಂದು ತನ್ನ ಅಧಿಕಾರ ಸ್ಥಾಪಿಸಲು ಪ್ರಯತ್ನಿಸಿದನು. ಆದರೆ ಅಲ್ಲಿದ್ದ ಸ್ವಾರ್ಥ ನಾಯಕರು ಅದಕ್ಕೆ ಅವಕಾಶ ಕೊಡಲಿಲ್ಲ. 1412ರಲ್ಲಿ ಆತನ ನಿಧನದೊಂದಿಗೆ ತುಗಲಕ್ ಆಡಳಿತ ಕೊನೆಗೊಂಡಿತು.

ಖಿಝರ್‌ಖಾನನ ಕುರಿತು ನೀವು ತಿಳಿದಿದ್ದೀರಿ. ಆತನು ಮುಹಮ್ಮದ್ ತುಗಲಕನ ಬಂಡುಕೋರ ನಾಯಕನಾಗಿದ್ದನು. ಆತನನ್ನು ತೈಮೂರನು, ಭಾರತದಿಂದ ಹಿಂದಿರುಗುವಾಗ ಪಂಜಾಬಿನ ಆಡಳಿತಗಾರನಾಗಿ ನೇಮಿಸಿದ್ದನು. ಮುಹಮ್ಮದ್ ತುಗಲಕನ ಮರಣಾನಂತರ ಖಿಝರ್‌ಖಾನ್ ದೆಹಲಿ ಸಾಮ್ರಾಜ್ಯವನ್ನು ವಶಪಡಿಸಿಕೊಂಡನು ಮತ್ತು

ತೈಮೂರನು ತನ್ನನ್ನು ನೇಮಿಸಿದಂತೆ ಆಡಳಿತ ನಡೆಸತೊಡಗಿದನು. ಖಿಝುರ್‌ಖಾನ್ 'ಸಯ್ಯದ್' ಕುಟುಂಬದವನೆಂದು ಪ್ರಸಿದ್ಧನಾಗಿದ್ದರೂ, ಆ ಕುಟುಂಬಕ್ಕೆ ಸೇರಿದವನೆಂದು ಸಾಬೀತಾಗಿರಲಿಲ್ಲ. ಖಿಝುರ್‌ಖಾನನು ದೇಶದಿಂದ ಅಶಾಂತಿ ತೊಲಗಿಸಲು ಪ್ರಯತ್ನಿಸಿದನು. ಆದರೆ ಅದರಲ್ಲಿ ವಿಶೇಷ ಫಲವೇನೂ ಕಾಣಲಿಲ್ಲ. ಏಳು ವರುಷದ ಆಡಳಿತದ ನಂತರ 1431ರಲ್ಲಿ ಆತನು ಮರಣಹೊಂದಿದನು ಮತ್ತು ಆತನ ಮಗನಾದ ಮುಬಾರಕ್‌ಷಾನು ಸಿಂಹಾಸನಾರೂಢನಾದನು. ಆತನೂ ಕೂಡ ಕಳೆದುಕೊಂಡ ದೆಹಲಿ ಸಾಮ್ರಾಜ್ಯದ ಆಡಳಿತವನ್ನು ಮರಳಿ ಪಡೆಯಲು ಮತ್ತು ದೇಶದಲ್ಲಿ ಶಾಂತಿ, ಸುವ್ಯವಸ್ಥೆ ಸ್ಥಾಪಿಸಲು ಪ್ರಯತ್ನಿಸಿದನು. ತೈಮೂರ್ ಕುಟುಂಬದೊಂದಿಗಿನ ಸಂಬಂಧವು ಆತನಿಗೆ ಇಷ್ಟವಿರಲಿಲ್ಲ. ಆ ಸಂಬಂಧ ಕಡಿಯುವ ನಿಟ್ಟಿನಲ್ಲಿ ಕೊಡಬೇಕಾದ ಕಪ್ಪ ಕೊಡುವುದನ್ನು ನಿಲ್ಲಿಸಿದನು. ಮುಬಾರಕ್‌ಷಾನು ಬಹಳ ಸನ್ನದ್ಧತೆಯಿಂದ ಬಂಡು ಕೋರರನ್ನು ಹತ್ತಿಕ್ಕುತ್ತಿದ್ದನು. ಆದರೂ ಪಂಜಾಬ್‌ನ ಕೋಕರು, ಮೇವಾಟರು, ರಜಪೂತರು ಮತ್ತು ಇತರ ಪ್ರಭಾವಶಾಲಿಗಳು ಆತನನ್ನು ನೆಮ್ಮದಿಯಿಂದಿರಲು ಬಿಡಲಿಲ್ಲ. ಅಲ್ಲಲ್ಲಿ ಅಶಾಂತಿ ಹರಡಿಸುತ್ತಿದ್ದರು. ಇತ್ತ ರಾಜಧಾನಿಯಲ್ಲಿ ಮುಬಾರಕ್‌ಷಾನ ನವ ಮುಸ್ಲಿಮ್ ಮಂತ್ರಿ ಮತ್ತು ಇತರ ಹಿಂದೂ ನಾಯಕರಿಂದಾಗಿ ದೂರುಗಳು ಕೇಳುತ್ತಿತ್ತು. ಪರಿಸ್ಥಿತಿಯನ್ನು ತಿಳಿಗೊಳಿಸಲು ಮುಬಾರಕ್‌ಷಾನು ಕಮಾಲ್‌ಮಲಿಕ್‌ನನ್ನು ಮಂತ್ರಿಯಾಗಿ ಸೇರಿಸಿಕೊಂಡನು. ಕಮಾಲ್ ಮಲಿಕನು ಜಾಣ್ಮೆಯಿಂದ ಕೆಲಸ ಮಾಡಿ ಆಂತರಿಕ ಸಮಸ್ಯೆಗಳನ್ನು ಬಗೆಹರಿಸಿದನು. ಆದರೆ ಆತನ ಪ್ರಭಾವಕ್ಕೆ ಕೆಲವು ಹಿಂದೂ ನಾಯಕರು ಅಸೂಯೆ ಪಟ್ಟರಲ್ಲದೆ, ಮುಬಾರಕ್‌ಷಾನನ್ನೂ ಮನಸ್ಸಿನೊಳಗೇ ದ್ವೇಷಿಸತೊಡಗಿದರು. ಇದು ಆಂತರಿಕ ಸಮಸ್ಯೆಯಾದರೆ ಹೊರಗಿ ನಿಂದಲೂ ಅಪಾಯ ತಪ್ಪಿರಲಿಲ್ಲ. ಕಾಬೂಲಿನ ಶೈಖ್‌ಅಲಿಯು ತಲೆನೋವಾಗಿ ಪರಿಣಮಿಸಿದ್ದನು. ಅವಕಾಶ ಸಿಕ್ಕಿದ್ದರೆ ಲಾಹೋರ್ ಮತ್ತು ಮುಲ್ತಾನನ್ನು ಆಕ್ರಮಿಸುತ್ತಿದ್ದನು. ಮಾಳ್ವದ ಹೋಷಿಂಗ್‌ಷಾನು ಗ್ವಾಲಿಯಾರ್ ತನಕ ಮತ್ತು ಜೋನ್‌ಪುರದ ಶರ್ಕಿ ಸುಲ್ತಾನನು ಬಯಾನ ವರೆಗೆ ಮುನ್ನುಗ್ಗಿದ್ದರು. ಒಟ್ಟಿನಲ್ಲಿ ದೇಶವು ಆಂತರಿಕ ಸಮಸ್ಯೆ ಮತ್ತು ಬಾಹ್ಯ ಒತ್ತಡಗಳಿಂದ ಕಂಗಾಲಾಗಿತ್ತು. ಈ ಸಮಸ್ಯೆಗಳಿಂದ ಹೊರಬರುವುದು ಅಷ್ಟು ಸುಲಭವಿರಲಿಲ್ಲ. ಮುಬಾರಕ್‌ಷಾನು ಸಾಧ್ಯವಾದಷ್ಟು ಸುಧಾರಣೆಗೆ ಪ್ರಯತ್ನಿಸಿದನು. ಜೋನ್‌ಪುರ ಪ್ರಾಂತ್ಯದ ಸರದಾರ ಫೈರೋಝನು ತುಗಲಕನ ನಂತರ 1394ರಲ್ಲಿ ಸ್ವಾತಂತ್ರ್ಯ ಘೋಷಿಸಿದ್ದನು. ಮುಬಾರಕ್‌ಷಾನು ಈ ಪ್ರಾಂತ್ಯವನ್ನು ದೆಹಲಿಯ ಸಾಮ್ರಾಜ್ಯಕ್ಕೊಳಪಡಿಸಲು ಯೋಚಿಸುತ್ತಿದ್ದನು. ಅನಿರೀಕ್ಷಿತವಾಗಿ ಜೋನ್‌ಪುರದ ಶರ್ಕಿ ಸರದಾರನಾದ ಇಬ್ರಾಹೀಮ್‌ಷಾನಿಗೆ ಮಾಳ್ವದ ಹೋಷಿಂಗ್‌ಷಾನೊಡನೆ ಸಂಘರ್ಷವೇರ್ಪಟ್ಟಿತು. ಇಬ್ಬರ ಸೈನ್ಯವು ಕಾದಾಟದಲ್ಲೇರ್ಪಟ್ಟ ಸಂದರ್ಭವನ್ನು ಬಳಸಿ ಮುಬಾರಕ್‌ಷಾನು ಜೋನ್‌ಪುರದ ಮೇಲೆ ಆಕ್ರಮಣ ನಡೆಸಿದನು. ಕಮಾಲ್ ಮಲಿಕ್‌ನನ್ನು ಜೊತೆಯಲ್ಲಿರಿಸಿದನು ಮತ್ತು ನಗರದ ಹೊರಗೆ ಡೇರೆ ಹಾಕಿ ಅಲ್ಲೇ ಸೈನ್ಯಕ್ಕೆ ಭರ್ತಿಗೊಳಿಸ ತೊಡಗಿದನು. ಇತ್ತ ಸರದಾರ್

ಮಲಿಕನು ಕೆಲವು ನಾಯಕರ ಜೊತೆ ಸೇರಿ ಮುಬಾರಕ್‌ಷಾನನ್ನು ವಧಿಸುವ ಕುತಂತ್ರ ನಡೆಸುತ್ತಿದ್ದನು ಮತ್ತು 1434ರಲ್ಲಿ ಮುಬಾರಕ್‌ಷಾ ಶುಕ್ರವಾರದ ನಮಾಝ್‌ಗಾಗಿ ಮಸೀದಿಗೆ ಹೋಗುತ್ತಿದ್ದಾಗ ದಾರಿಯಲ್ಲಿ ಸರದಾರ್ ಮಲಿಕನು ಅವನ ಕೊಲೆ ಮಾಡಿದನು.

ಮುಬಾರಕ್‌ಷಾನನ್ನು ಕೊಲೆ ಮಾಡಿ ಸರದಾರ್ ಮಲಿಕನು ದೆಹಲಿ ಸಾಮ್ರಾಜ್ಯವನ್ನು ವಶಪಡಿಸಿಕೊಂಡನು. ಹೆಸರಿಗಾಗಿ ಸರದಾರ್ ಮಲಿಕನು, ಮುಬಾರಕ್‌ಷಾನ ಸೋದರ ಮಗನಾದ ಮುಹಮ್ಮದ್‌ಷಾನನ್ನು ಉತ್ತರಾಧಿಕಾರಿಯಾಗಿ ನೇಮಿಸಿದನು. ಆದರೆ ಆಡಳಿತದ ಸಂಪೂರ್ಣ ನಿಯಂತ್ರಣವನ್ನು ತನ್ನಲ್ಲೇ ಇರಿಸಿಕೊಂಡನು. ಕೆಲವೇ ದಿನಗಳಲ್ಲಿ ಮುಬಾರಕ್‌ಷಾ ಖಿಲ್ಜಿಯನ್ನು ಕೊಲೆಮಾಡಿ ಖುಸ್ರೂಖಾನ್ ತಂದಿದ್ದ ಅವಸ್ಥೆಗೇ ದೆಹಲಿ ಸಾಮ್ರಾಜ್ಯವನ್ನು ತಂದು ಮುಟ್ಟಿಸಿದನು. ಪ್ರಮುಖ ಹುದ್ದೆಗಳಲ್ಲಿ ಹಿತಚಿಂತಕ ಅಧಿಕಾರಿಗಳ ಪೈಕಿ ಒಬ್ಬೊಬ್ಬರನ್ನೇ ಬಂಧಿಸಿದನು ಮತ್ತು ಕೆಲವರನ್ನು ಕೊಲೆ ಮಾಡಿಸಿ ದನು. ಅವರ ಸ್ಥಾನದಲ್ಲಿ ಮುಬಾರಕ್‌ಷಾನ ಕೊಲೆಗೆ ಆತನ ಜೊತೆ ಸಹಕರಿಸಿದವರನ್ನು ನೇಮಿಸತೊಡಗಿದನು. ಜನರು ದೆಹಲಿಯ ಈ ಅಧೋಗತಿಯನ್ನು ಕಂಡು ಮರುಗ ತೊಡಗಿದರು. ದೆಹಲಿಯ ನಾಗರಿಕರು, ಮುಬಾರಕ್‌ಷಾನಲ್ಲಿ ದೆಹಲಿ ಸಾಮ್ರಾಜ್ಯದ ಪ್ರತಿಷ್ಠೆಯನ್ನು ಮರಳಿ ತರುವ ನಿರೀಕ್ಷೆ ಇಟ್ಟುಕೊಂಡಿದ್ದರು. ಆದರೆ ಆತನ ಕೊಲೆಯೊಂದಿಗೆ ಅವರ ನಿರೀಕ್ಷೆಯು ನಂದಿಹೋಯಿತು. ಮುಬಾರಕ್‌ಷಾನ ಕೊಲೆಗೆ ಪ್ರತೀಕಾರ ಪಡೆಯಲು ಬದಾಯೂನ್ ಮತ್ತು ಬುಲಂದ್‌ಶಹರ್‌ನ ಪಂಡಿತರು ಕಷ್ಟಪಟ್ಟು ಆಡಳಿತಾಧಿಕಾರಿಗಳಾದ ಅಲಾದಾದ್‌ಖಾನ್ ಲೋದಿ ಮತ್ತು ಕಮಾಲ್ ಮಲಿಕರನ್ನು ಸೇರಿಸಿ ಒಂದು ಒಕ್ಕೂಟ ರಚಿಸಿದರು ಮತ್ತು ಒಂದು ಬಲಿಷ್ಠ ಸೈನ್ಯವನ್ನು ಸಂಘಟಿಸಿ ದೆಹಲಿಯ ಕಡೆಗೆ ಮುನ್ನುಗ್ಗಿದರು. ದೆಹಲಿಯಲ್ಲಿದ್ದ ಮುಹಮ್ಮದ್‌ಷಾ, ಮುಬಾರಕ್‌ಷಾನ ಕೊಲೆಗಾರ ಸರದಾರ್‌ಮಲಿಕ್ ಮತ್ತು ಇತರ ನಾಯಕರೊಂದಿಗೆ ಮೊದಲೇ ಅಸಮಾಧಾನ ಹೊಂದಿದ್ದನು. ಹೊರಗಿನಿಂದ ಸೈನ್ಯ ಬರುತ್ತಲೇ ಮುಹಮ್ಮದ್‌ಷಾ ಆ ಸೈನ್ಯಕ್ಕೆ ಸಂಪೂರ್ಣ ಸಹಕಾರವಿತ್ತನು. ಈ ಮೂಲಕ ಸರದಾರ್ ಮಲಿಕ್ ಮತ್ತು ಇತರ ಕೊಲೆಗಡುಕರನ್ನು ಕೊಂದು ದೆಹಲಿಯನ್ನು ಅಕ್ರಮಿಗಳಿಂದ ಮುಕ್ತಗೊಳಿಸಿದನು. ನಂತರ ಮುಹಮ್ಮದ್‌ಷಾನು ಕಮಾಲ್‌ಮಲಿಕನನ್ನು ತನ್ನ ಮಂತ್ರಿಯಾಗಿ ನೇಮಿಸಿದನು ಮತ್ತು ಇತರರಿಗೂ ಉತ್ತಮ ಹುದ್ದೆಗಳನ್ನು ನೀಡಿದನು. ಆದರೆ ಅಲಾದಾದ್‌ಖಾನನು ಯಾವುದನ್ನೂ ಸ್ವೀಕರಿಸದೆ ಮರಳಿದನು.

ಮುಹಮ್ಮದ್‌ಷಾನ ಮರಣಾನಂತರ ಆತನ ಮಗ ಅಲ್ಲಾವುದ್ದೀನ್ ಉತ್ತರಾ ಧಿಕಾರಿಯಾದನು. ಆತನ ಅನರ್ಹತೆಯಿಂದಾಗಿ ಮೊದಲಿನಿಂದಲೇ ನಿಯಂತ್ರಣದಲ್ಲಿಲ್ಲದ ಅನೇಕ ಪ್ರಾಂತ್ಯಗಳು ಸಂಪೂರ್ಣ ಸ್ವತಂತ್ರವಾಯಿತು. ಮುಹಮ್ಮದ್‌ಷಾನ ಆಡಳಿತವು ದೆಹಲಿ ಪರಿಸರದ ಪ್ರದೇಶಗಳಿಗೆ ಮಾತ್ರ ಸೀಮಿತವಾಯಿತು. 1451ರಲ್ಲಿ ಆಡಳಿತವು ಕೊನೆಯುಸಿರೆಳೆಯುತ್ತಿರುವಾಗ ಸರ್‌ಹಿಂದ್ ಪ್ರಾಂತ್ಯದ ನಾಯಕನಾದ ಬಹ್‌ಲೂಲ್ ಲೋದಿಗೆ

ಆಡಳಿತವನ್ನು ಬಿಟ್ಟುಕೊಟ್ಟು ಬದಾಯೂನ್‌ಗೆ ತೆರಳಿ ಅಲ್ಲೇ ಜೀವನ ಸಾಗಿಸಿದನು. ಹೀಗೆ ದೆಹಲಿ ಸಾಮ್ರಾಜ್ಯವು ಲೋದಿ ಮನೆತನದ ಕೈಗೆ ತಲುಪಿತು.

## ಪ್ರಶ್ನೆಗಳು

1. ಸಯ್ಯದ್ ಮನೆತನದ ಸ್ಥಾಪಕನಾರು? ಈ ಮನೆತನವನ್ನು ಭಾಗ್ಯವಂತರೆಂದು ಏಕೆ ಕರೆಯಲಾಗುತ್ತದೆ?
2. ಖಿಝುರ್ ಖಾನನ ಕುರಿತು ನೀವು ಏನು ತಿಳಿದಿದ್ದೀರಿ?
3. ಮುಬಾರಕ್‌ಷಾ ಯಾರು? ಆತನು ಪರಿಸ್ಥಿತಿಯ ಸುಧಾರಣೆಗೆ ಯಾವ ಪ್ರಯತ್ನಗಳನ್ನು ನಡೆಸಿದನು?
4. ಆತನು ಏಕೆ ಮತ್ತು ಹೇಗೆ ಕೊಲೆಯಾದನು?
5. ಮುಬಾರಕ್‌ಷಾನ ನಂತರ ದೆಹಲಿ ಸಾಮ್ರಾಜ್ಯದ ಸ್ಥಿತಿಯೇನಾಯಿತು?
6. ಲೋದಿ ಕುಟುಂಬವು ಯಾವ ರೀತಿ ಅಧಿಕಾರಕ್ಕೆ ಬಂತು?

# ಅಧ್ಯಾಯ - 4

## ಲೋದಿ ಕುಟುಂಬ: (1451-1562)

ಬಹ್‌ಲೂಲ್‌ಖಾನ್ ಮೂಲತಃ ಅಫಘಾನಿಸ್ಥಾನದವನಾಗಿದ್ದನು. ಗಡಿಭಾಗದಲ್ಲಿ ಪ್ರಸಿದ್ಧವಾಗಿದ್ದ ಲೋದಿ ಗೋತ್ರಕ್ಕೆ ಸೇರಿದವನಾಗಿದ್ದನು. ಭಾರತದ ಇತಿಹಾಸದಲ್ಲಿ, ಪ್ರಸಿದ್ಧಿ ಗಳಿಸಿದವರಲ್ಲಿ ಮೊದಲಿಗರು ಲೋದಿ ಕುಟುಂಬದ ಫೈರೋಝ್ ತುಗಲಕನ ಮಂತ್ರಿಯಾಗಿದ್ದ ಝುಫರ್‌ಖಾನ್‌ಲೋದಿ ಆಗಿದ್ದನು. ಆತನ ನಿಷ್ಠೆ, ಶೂರತನ, ಬುದ್ಧಿವಂತಿಕೆ ಮತ್ತು ಆಡಳಿತ ವ್ಯವಸ್ಥೆಯ ಸಾಮರ್ಥ್ಯದಿಂದಾಗಿ ಫೈರೋಝ್ ತುಗಲಕನು ಆತನನ್ನು ಮೆಚ್ಚಿಕೊಂಡಿದ್ದನು. ಝುಫರ್‌ಖಾನ್‌ನ ನಂತರ ಆತನ ಮಕ್ಕಳು ಮತ್ತು ಕುಟುಂಬಸ್ಥರು ತಮ್ಮ ವೈಶಿಷ್ಟ್ಯದಿಂದಾಗಿ ಪ್ರಸಿದ್ಧರಾಗಿದ್ದರು. ದೆಹಲಿ ಸಾಮ್ರಾಜ್ಯದ ಯಾವ ಪದವಿಯಲ್ಲಿದ್ದರೂ ಕರ್ತವ್ಯ ಪ್ರಜ್ಞೆಯಿಂದ ಕಾರ್ಯ ನಿರ್ವಹಿಸುತ್ತಿದ್ದರು. ಫೈರೋಝ್ ತುಗಲಕನ ಕೊನೆಯ ದಿನಗಳು ದೆಹಲಿ ಸಾಮ್ರಾಜ್ಯದಲ್ಲಿ ಒಳಜಗಳ, ಹೊರಗಿನಿಂದ ಆಕ್ರಮಣ ಮತ್ತು ಸ್ವಾರ್ಥ ನಾಯಕರ ಷಡ್ಯಂತ್ರಗಳ ಕಾಲವಾಗಿತ್ತು ಎಂಬುದನ್ನು ನೀವು ತಿಳಿದಿದ್ದೀರಿ. ಆದರೆ ಲೋದಿ ಕುಟುಂಬವು ಎಲ್ಲಾ ಕೆಡುಕುಗಳಿಂದ ಮುಕ್ತವಾಗಿತ್ತಲ್ಲದೆ ಶಾಂತಿ ಸ್ಥಾಪನೆಯ ನಿಟ್ಟಿನಲ್ಲಿ ಮುಂಚೂಣಿಯಲ್ಲಿತ್ತು. ತೈಮೂರನ ಸಶಸ್ತ್ರ ಮತ್ತು ಶಿಸ್ತುಬದ್ಧ ಸೈನಿಕರೆದುರು ತಮ್ಮ ಸೀಮಿತ ಸಲಕರಣೆಗಳನ್ನು ಇಟ್ಟುಕೊಂಡು

ಮುಲ್ತಾನ್, ಲಾಹೋರ್ ಮತ್ತು ದೆಹಲಿಯಲ್ಲಿ ಉಗ್ರವಾಗಿ ಹೋರಾಟ ನಡೆಸಿದ್ದರು. ಅವರು ತಮ್ಮ ಪ್ರಾಣವನ್ನು ಒತ್ತೆ ಇಟ್ಟು ದುಷ್ಟ ಮೊಗಲರಿಂದ ದೇಶವನ್ನು ರಕ್ಷಿಸುತ್ತಿದ್ದರು ಮತ್ತು ಕೊನೆಯುಸಿರಿನ ವರೆಗೂ ಅದರಲ್ಲೇ ಸ್ಥಿರವಾಗಿದ್ದರು. ಅನೇಕ ಆಡಳಿತಾಧಿಕಾರಿಗಳು ಈ ಅಕ್ರಮಿಯ ಮುಂದೆ ಭಟ್ಟಂಗಿತನಕ್ಕೆ ಹಾಜರಾಗುತ್ತಿದ್ದರು. ಆದುದರಿಂದಲೇ ತೈಮೂರನು ಈ ಕುಟುಂಬವನ್ನು ಅತ್ಯಂತ ದ್ವೇಷಿಸುತ್ತಿದ್ದನು. ಇದುವೇ ಮೊಗಲರು ಮತ್ತು ಅಫಘಾನಿಸ್ಥಾನದವರ ಮಧ್ಯೆ ವೈರ, ವಿದ್ವೇಷಕ್ಕೆ ಬುನಾದಿಹಾಕಿತ್ತು. ಲೋದಿ ಕುಟುಂಬವು ಅತ್ಯಂತ ಬಲಿಷ್ಠವಾಗಿದ್ದುದರ ಹೊರತಾಗಿಯೂ ಒಂದು ಪ್ರತ್ಯೇಕ ಪ್ರಾಂತ್ಯದ ಬೇಡಿಕೆಯನ್ನು ಮುಂದಿಟ್ಟಿರಲಿಲ್ಲ. ಏಕೆಂದರೆ ದೆಹಲಿಯ ಕೇಂದ್ರಾಡಳಿತದ ಮಹತ್ವವನ್ನು ಅವರು ತಿಳಿದಿದ್ದರು. ಯಾವುದೇ ಕಾರಣಕ್ಕೂ ಅದು ದುರ್ಬಲವಾಗುವುದು ಅವರಿಗೆ ಇಷ್ಟವಿರಲಿಲ್ಲ. ಅವರು ಯಾವಾಗಲೂ ಕಳೆದುಕೊಂಡ ದೆಹಲಿ ಸಾಮ್ರಾಜ್ಯವನ್ನು ಮರಳಿ ಪಡೆಯಬೇಕು ಮತ್ತು ದೇಶದಲ್ಲಿ ಶಾಂತಿ, ಸುವ್ಯವಸ್ಥೆ ಸ್ಥಾಪನೆಯಾಗಬೇಕೆಂದು ಬಯಸುತ್ತಿದ್ದರು.

## ಬಹ್‌ಲೂಲ್ ಲೋದಿ: 1451-89

ಬಹ್‌ಲೂಲ್ ಲೋದಿ, ಲೋದಿ ಕುಟುಂಬದ ಉಜ್ವಲ ತಾರೆಯಾಗಿದ್ದನು. ಆತನ ವೈಶಿಷ್ಟ್ಯಗಳಿಂದಾಗಿ ಮುಹಮ್ಮದ್ ಷಾನು ಅವನನ್ನು ತನ್ನ ಮಗನಂತೆ, ಅಲ್ಲಾವುದ್ದೀನ್ ಷಾನು ತನ್ನ ದೊಡ್ಡಣ್ಣನಂತೆ ಪರಿಗಣಿಸುತ್ತಿದ್ದನು. ಅಲ್ಲಾವುದ್ದೀನನು ತನ್ನ ಆಡಳಿತವನ್ನು ಆತನಿಗೊಪ್ಪಿಸಿದಾಗ ದೆಹಲಿ ಸಾಮ್ರಾಜ್ಯವು ತನ್ನ ಹೆಸರನ್ನು ಮಾತ್ರ ಉಳಿಸಿತ್ತು. ರಾಜನ ಅನರ್ಹತೆ, ನಾಯಕರು ಮತ್ತು ಸೈನಿಕರ ಸ್ವಾರ್ಥದಿಂದಾಗಿ ದೇಶವು ಒಡೆದಿತ್ತು. ಬಂಡಾಯಗಾರರು ಮತ್ತು ಕ್ಷೋಭೆ ಹರಡುವವರ ತಾಣವಾಗಿ ಮಾರ್ಪಟ್ಟಿತ್ತು. ಈ ಚಿಂತಾಜನಕ ಪರಿಸ್ಥಿತಿಯಲ್ಲಿ ಬಹ್‌ಲೂಲ್ ಲೋದಿಯು ನಿರಾಶನಾಗದೆ, ಎದೆಗುಂದದೆ ಒಂದು ತಂತ್ರವನ್ನು ಹೂಡಿದನು. ತನ್ನ ಗೋತ್ರದ ಪ್ರಮುಖರನ್ನು ಮತ್ತು ಇತರ ನಿಷ್ಠಾವಂತ ಪಠಾಣರನ್ನು ಗಣನೀಯ ಸಂಖ್ಯೆಯಲ್ಲಿ ಕರೆಸಿದನು ಮತ್ತು ವಿವಿಧ ಭಾಗಗಳ ಜವಾಬ್ದಾರಿಯನ್ನು ಅವರ ಕೈಗೊಪ್ಪಿಸಿದನು. ಮೆಲ್ಲಮೆಲ್ಲನೆ ಅವರನ್ನು ದೇಶದ ಮೂಲೆ ಮೂಲೆಗೂ ಕಳುಹಿಸಿದನು. ಅವರು ಅತ್ಯಂತ ಚಾಣಾಕ್ಷತನದಿಂದ ಕಾರ್ಯ ನಿರ್ವಹಿಸಿದರು. ಅವರ ಸಹಾಯದಿಂದ ಅಲ್ಪಾವಧಿಯಲ್ಲಿ ಆತನು ಬಂಡಾಯಗಾರರನ್ನು ದಮನಿಸಿದನು ಮತ್ತು ದೇಶದ ಬಹುಭಾಗದಲ್ಲಿ ಶಾಂತಿ ಸುವ್ಯವಸ್ಥೆ ಕಾಪಾಡುವಲ್ಲಿ ಯಶಸ್ವಿಯಾದನು. ಕೊನೆಗೆ ಆತನು ಜೋನ್‌ಪುರದ ಶರ್ಕಿ ಸರದಾರನನ್ನು ಸೋಲಿಸಿ ಅಲ್ಲಿನ ಆಡಳಿತವನ್ನು ತನ್ನ ಹಿರಿಯ ಪುತ್ರ ಬಾರ್‌ಬಕ್‌ಷಾನಿಗೆ ವಹಿಸಿಕೊಟ್ಟನು. ಈ ವಿಜಯದಿಂದ ದೆಹಲಿ ಸಾಮ್ರಾಜ್ಯವು ವಿಸ್ತಾರಗೊಂಡಿತು ಮತ್ತು ಬಂಡಾಯಗಾರರು ಧೈರ್ಯಗುಂದಿ, ತಾವಾಗಿಯೇ ಶಾಂತರಾದರು.

ಒಂದು ವಿಶಾಲ ಪ್ರದೇಶ ತನ್ನ ಅಧಿಕಾರದಲ್ಲಿದ್ದರೂ ಬಹ್‌ಲೂಲ್ ಲೋದಿ ತನ್ನನ್ನು ನಿಯಂತ್ರಣದಲ್ಲಿಟ್ಟಿದ್ದನು. ಅತ್ಯಂತ ಸರಳ ಜೀವನ ಸಾಗಿಸುತ್ತಿದ್ದನು. ನಮಾಝ್ ಮತ್ತು ಉಪವಾಸ ವ್ರತವನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದನು. ವಿದ್ವಾಂಸರು ಮತ್ತು ಹಿರಿಯರನ್ನು ಗೌರವಿಸುತ್ತಿದ್ದನು. ಅವರ ಸಂಗ ಬೆಳೆಸುತ್ತಿದ್ದನು. ಆತನು ಅತ್ಯಂತ ಉದಾರಿ ಮತ್ತು ನ್ಯಾಯನಿಷ್ಠನಾಗಿದ್ದನು. ಪ್ರಜೆಗಳ ದೂರುಗಳನ್ನು ನೇರವಾಗಿ ಆಲಿಸುತ್ತಿದ್ದನು ಮತ್ತು ನ್ಯಾಯ ಒದಗಿಸುತ್ತಿದ್ದನು. ಅಲ್ಲಾವುದ್ದೀನ್‌ಷಾನನ್ನು ಗೌರವ ದಿಂದ ಕಾಣುತ್ತಿದ್ದನು. ಜೀವನದ ಕೊನೆಯ ವರೆಗೂ ನಾಣ್ಯಗಳಲ್ಲಿ ಮತ್ತು ಬ್ಯಾಂಕಿನ ಪತ್ರಗಳಲ್ಲಿ ಆತನದೇ ಹೆಸರನ್ನು ನಮೂದಿಸಿದ್ದನು. ಬದಾಯೂನ್ ಮತ್ತು ಅದರ ಪರಿಸರದ ಪ್ರದೇಶಗಳನ್ನು ಆತನಿಗೆ ಬಿಟ್ಟುಕೊಟ್ಟಿದ್ದನು. ಅಲ್ಲಿ ಅಲ್ಲಾವುದ್ದೀನನು ತನ್ನ ಜೀವನದ ಕೊನೆಯ ದಿನಗಳನ್ನು ಶಾಂತವಾಗಿ ಕಳೆದನು. ಬಹ್‌ಲೂಲ್ ಲೋದಿಯು ತನ್ನ ಸೇವಕರು ಮತ್ತು ಸೈನಿಕರನ್ನು ಗೌರವಿಸುತ್ತಿದ್ದನು. ಅವರ ಜೊತೆ ವಿನಮ್ರ ವಾಗಿರುತ್ತಿದ್ದನು. ಅವರ ಮುಂದೆ ದೊಡ್ಡಸ್ತಿಕೆ ಮತ್ತು ಪ್ರೌಢಿಮೆಯನ್ನು ಪ್ರದರ್ಶಿಸುತ್ತಿ ರಲಿಲ್ಲ. ಈ ಎಲ್ಲಾ ವೈಶಿಷ್ಟ್ಯಗಳಿಂದಾಗಿ ತನ್ನ ಮನೆತನದ ಅತ್ಯಂತ ಪ್ರಸಿದ್ಧ ಸರದಾರ ನಾಗಿದ್ದನು. ಅವರ ಸಹಾಯ ಮತ್ತು ಸಹಕಾರದಿಂದ ಸುದೀರ್ಘ ಮೂವತ್ತೆರಡು ವರ್ಷಗಳ ಆಳ್ವಿಕೆ ನಡೆಸಿದನು ಮತ್ತು ದೆಹಲಿ ಸಾಮ್ರಾಜ್ಯಕ್ಕೆ ಮರಳಿ ಜೀವ ತುಂಬಿದನು.

## ಪ್ರಶ್ನೆಗಳು

1. ಲೋದಿ ಕುಟುಂಬದಲ್ಲಿ ಆಳ್ವಿಕೆಯನ್ನು ಆರಂಭಿಸಿದವನಾರು?
2. ಲೋದಿಗಳ ಹಿಂದಿನ ವೈಶಿಷ್ಟ್ಯಗಳು ಹೇಗಿದ್ದವು?
3. ಬಹ್‌ಲೂಲ್ ಲೋದಿಯ ಜೀವನ ಮತ್ತು ಸಾಧನೆಯ ಮೇಲೆ ಬೆಳಕು ಚೆಲ್ಲಿ.
4. ಅಫಘಾನಿ ಸರದಾರರ ಸಹಾಯ ಪಡೆಯಲು ಬಹ್‌ಲೂಲ್ ಏನು ಮಾಡಿದನು?
5. ಜೋನ್‌ಪುರದ ಶರ್ಕಿ ಸರದಾರರೊಂದಿಗೆ ಬಹ್‌ಲೂಲನು ಹೇಗೆ ವರ್ತಿಸಿದನು?
6. ಈ ಕೆಳಗಿನ ಇಸವಿಗಳು ಏಕೆ ಪ್ರಸಿದ್ಧವಾಗಿವೆ?

   1394, 1412, 1414, 1421.

# ಅಧ್ಯಾಯ - 5

## ಸಿಕಂದರ್ ಲೋದಿ: (1489-1517)

ಬಹ್‌ಲೂಲ್ ಲೋದಿಯ ನಂತರ ಆತನ ಕಿರಿಯ ಮಗ ಸಿಕಂದರ್ ಲೋದಿಯು ಪಟ್ಟವೇರಿದನು. ಆತನು ದೊಡ್ಡ ವಿದ್ವಾಂಸನೂ, ಶೂರನೂ ಆಗಿದ್ದನು. ಆತನು ತನ್ನ

ಐವರು ಸೋದರರಲ್ಲಿ ಕಿರಿಯವನಾಗಿದ್ದನು. ಜ್ಞಾನ, ದೇವಭಯ, ಹೃದಯಶುದ್ಧಿ, ದಕ್ಷ ಆಡಳಿತದಿಂದಾಗಿ ಎಲ್ಲರಿಗಿಂತಲೂ ಪ್ರಸಿದ್ಧನಾಗಿದ್ದನು. ಆದುದರಿಂದ ಬಹ್‌ಲೂಲ್ ಲೋದಿಯ ಉತ್ತರಾಧಿಕಾರಿಯಾಗಿ ಆತನ ಮೇಲೆಯೇ ಸಮಾಜದ ಕಣ್ಣಿತ್ತು. ಬಹ್‌ಲೂಲ್ ಲೋದಿಯಂತಹ ನಿಷ್ಕಳಂಕ ಮತ್ತು ಪರಿಶುದ್ಧನಿಗೆ ಅಲ್ಲಾಹನು ಸಿಕಂದರ್‌ನಂತಹ ಉತ್ತಮ ಗುಣವಿರುವ ಮಗನನ್ನು ಕರುಣಿಸಿದನು ಮತ್ತು ಸಿಕಂದರನು ತಾನೋರ್ವ ಸಮರ್ಥ ಉತ್ತರಾ ಧಿಕಾರಿಯೆಂದು ಸಾಬೀತು ಪಡಿಸಿದನು. ಜೋನ್‌ಪುರದ ಶರ್ಕಿ ಆಡಳಿತದ ವ್ಯವಸ್ಥೆಯನ್ನೂ ನೀಡಿದ್ದ ಸಿಕಂದರನ ಹಿರಿಯ ಸೋದರ ಬಾರ್‌ಬಕನಿಗೆ ಸಿಕಂದರನ ಆಯ್ಕೆಯು ಇಷ್ಟವಿರಲಿಲ್ಲ. ತನ್ನನ್ನು ಸರದಾರನಾಗಿ ನೇಮಿಸಬೇಕೆಂದು ಆತನು ಆಗ್ರಹಿಸುತ್ತಿದ್ದನು. ಅದಕ್ಕಾಗಿ ಹಟಹಿಡಿದನು. ಆದರೆ ಅವನಿಂದ ಅದು ಸಾಧ್ಯವಾಗಲಿಲ್ಲ. ಕೊನೆಗೆ ಆತ ಸೋತು ಬಂಧನಕ್ಕೊಳಗಾದನು. ಸಿಕಂದರನು ಆತನೊಂದಿಗೆ ಉತ್ತಮವಾಗಿ ವರ್ತಿಸಿದನು. ಪ್ರತೀಕಾರ ಪಡೆಯದೆ ಆತನಿಗೆ ಕ್ಷಮೆ ನೀಡಿದನು. ಆದರೆ ಸಮಾಜದಲ್ಲಿ ಅಶಾಂತಿ ಹರಡುವ ಭಯದಿಂದ ಆತನನ್ನು ಬಿಟ್ಟು ಬಿಡದೆ, ಶರ್ಕಿ ಆಡಳಿತವನ್ನು ದೆಹಲಿಗೆ ವರ್ಗಾಯಿಸಿದನು. ನಂತರ ಹುಸೈನ್ ಷಾ ಶರ್ಕಿಯ ಮೇಲೆ ಆಕ್ರಮಣ ಮಾಡಿ, ಅದರ ಜೊತೆ ಬಿಹಾರವನ್ನೂ ವಶಪಡಿಸಿಕೊಂಡನು. ದೆಹಲಿ ಸರದಾರರ ಪ್ರಾಬಲ್ಯವನ್ನು ಕಂಡು ಇತ್ತ ಬಂಗಾಳದ ಆಡಳಿತಾಧಿಕಾರಿಯೂ ಹೆದರಿ 'ಸ್ನೇಹ ಒಪ್ಪಂದ' ಮಾಡಿಕೊಂಡನು. ಧೂಲ್‌ಪುರ, ಗ್ವಾಲಿಯಾರ್ ಇತ್ಯಾದಿ ಪ್ರದೇಶಗಳ ರಾಜರುಗಳೂ ಸಂತೋಷದಿಂದ ಅನುಸರಣೆಗೆ ಒಪ್ಪಿಕೊಂಡರು.

ಉತ್ತರ ಭಾರತದ ಪ್ರದೇಶಗಳಲ್ಲಿ ಆಡಳಿತ ವ್ಯವಸ್ಥೆಯು ಸುಸೂತ್ರವಾಗಿರುವುದರಿಂದ ಸಮಾಧಾನಗೊಂಡು ಸಿಕಂದರ್ ಲೋದಿಯು ದಕ್ಷಿಣದ ಕಡೆಗೆ ಗಮನಹರಿಸಿದನು. ತನ್ನ ರಾಜಧಾನಿಯನ್ನು ದೆಹಲಿಯಿಂದ ದಕ್ಷಿಣದ ಕಡೆಗೆ ವರ್ಗಾಯಿಸಲು ಆಲೋಚಿಸಿದನು. ದೆಹಲಿಯು ತೈಮೂರನ ಆಕ್ರಮಣದಿಂದ ಸಂಪೂರ್ಣವಾಗಿ ನಾಶಗೊಂಡಿದ್ದರಿಂದ ಆಗ್ರಾದ ಸಮೀಪ 'ಸಿಕಂದರ್' ಎಂಬ ಹೆಸರಿನ ನಗರಕ್ಕೆ ಬುನಾದಿ ಹಾಕಿದನು ಮತ್ತು ರಾಜಧಾನಿಯನ್ನು ದೆಹಲಿಯಿಂದ ಸಿಕಂದರಕ್ಕೆ ವರ್ಗಾಯಿಸಿದನು.

## ಸಿಕಂದರನ ಜೀವನ ಮತ್ತು ವ್ಯಕ್ತಿತ್ವ

ಸಿಕಂದರನು ಸುದೀರ್ಘ ಇಪ್ಪತ್ತೆಂಟು ವರ್ಷಗಳ ಕಾಲ ಅತ್ಯುತ್ತಮವಾಗಿ ಆಡಳಿತ ನಡೆಸಿದನು. ಆತನ ಚಾರಿತ್ರ್ಯ, ಧೈರ್ಯ, ನ್ಯಾಯಪಾಲನೆ ಮತ್ತು ಆಡಳಿತ ದಕ್ಷತೆಯಿಂದ ದೇಶದಲ್ಲಿ ಶಾಂತಿ ಮತ್ತು ಸುಭಿಕ್ಷೆ ನೆಲೆಸಿತ್ತು. ಅಲ್ಲಾಹನ ಅನುಗ್ರಹದಿಂದ ಬೆಳೆ ಸಮೃದ್ಧವಾಗಿತ್ತು. ಆ ಮೂಲಕ ಪ್ರಜೆಗಳು ಸುಭಿಕ್ಷೆಯಿಂದ ಜೀವನ ಸಾಗಿಸುವಂತಾಯಿತು. ಸಿಕಂದರನು ಮಾರುಕಟ್ಟೆಯಲ್ಲಿ ಸರಕಿನ ಬೆಲೆಯ ಮೇಲೂ ನಿಗಾ ಇಡುತ್ತಿದ್ದನು. ಆದುದರಿಂದ ಕಡಿಮೆ ಆದಾಯವಿರುವವರಿಗೂ ಮೂಲಭೂತ ಅವಶ್ಯಕತೆಗಳು ಸುಲಭದಲ್ಲಿ ದೊರೆಯುತ್ತಿತ್ತು.

ಸಿಕಂದರನು ಸಣ್ಣವನಾಗಿರುವಾಗ ಆತನ ಶಿಕ್ಷಣ ಮತ್ತು ತರಬೇತಿಗೆ ಉತ್ತಮ ವ್ಯವಸ್ಥೆ ಕಲ್ಪಿಸಲಾಗಿತ್ತು. ಆತ ಸ್ವತಃ ವಿಜ್ಞಾನ ಮತ್ತು ಕಲೆಯನ್ನು ಕರಗತ ಮಾಡಿದ್ದನು ಮತ್ತು ಆ ಕಾಲದ ದೊಡ್ಡ ವಿದ್ವಾಂಸನಾಗಿದ್ದನು. ಫಾರ್ಸಿಯ ಖ್ಯಾತ ಕವಿ ಮತ್ತು ವೈದ್ಯಕೀಯ ಶಾಸ್ತ್ರದ ಪಂಡಿತನಾಗಿದ್ದನು. ಆತನ ಕಾಲದಲ್ಲಿ ಅರಬಿ, ಫಾರ್ಸಿ ಮತ್ತು ಧಾರ್ಮಿಕ ವಿದ್ಯಾಭ್ಯಾಸ ಪ್ರಗತಿ ಹೊಂದಿತ್ತು. ಅನೇಕ ಉತ್ತಮ ಪುಸ್ತಕಗಳು ಬೆಳಕಿಗೆ ಬಂದವು. ಮುಸ್ಲಿಮೇತರರೂ ಫಾರ್ಸಿ ಭಾಷೆಯ ಕಡೆಗೆ ಗಮನ ಹರಿಸಿದರು.

ಸಿಕಂದರನಿಗೆ ಪ್ರಜೆಗಳ ಕ್ಷೇಮಾಭಿವೃದ್ಧಿಯ ಕುರಿತು ಅಪಾರ ಚಿಂತೆಯಿತ್ತು. ಮೂಲಭೂತ ಸೌಕರ್ಯಗಳ ಕಡೆಗೆ ವಿಶೇಷ ಗಮನಹರಿಸಿದನು. ಮಾರ್ಗಗಳನ್ನು ದುರಸ್ತಿಪಡಿಸಿದನು. ಪ್ರಯಾಣದ ವ್ಯವಸ್ಥೆ, ಪ್ರಯಾಣಿಕರಿಗೆ ವಸತಿ ಸೌಕರ್ಯ, ಪೊಲೀಸ್ ಠಾಣೆ, ಮಸೀದಿ ನಿರ್ಮಾಣ, ಮದರಸ ಸ್ಥಾಪನೆ ಇತ್ಯಾದಿ ಕಾರ್ಯಗಳು ನಡೆದವು. ಜನರ ವಿಶ್ವಾಸ ಮತ್ತು ಚಾರಿತ್ರ್ಯ ನಿರ್ಮಾಣಕ್ಕೂ ಪ್ರಯತ್ನಿಸಲಾಯಿತು. ಶಿಸ್ತು ಮತ್ತು ನ್ಯಾಯಪಾಲನೆಗೆ ವಿಶೇಷ ಒತ್ತು ನೀಡುತ್ತಿದ್ದನು. ಅಲ್ಲಲ್ಲಿ ನ್ಯಾಯಾಲಯ ಗಳನ್ನು ಸ್ಥಾಪಿಸಿ ನ್ಯಾಯಾಧೀಶರನ್ನು ನೇಮಿಸುತ್ತಿದ್ದನು. ಅವರ ಮೇಲೆ ನಿಗಾ ಇಡುತ್ತಿದ್ದನು. ರಾಜ ಸ್ವತಃ ನ್ಯಾಯ ಮತ್ತು ಶಿಸ್ತನ್ನು ಇಷ್ಟಪಡುತ್ತಿದ್ದನು ಮತ್ತು ಉತ್ತಮ ವ್ಯವಹಾರ ಜ್ಞಾನವುಳ್ಳವನಾಗಿದ್ದನು. ಒಂದು ಸಂದರ್ಭದಲ್ಲಿ ಗ್ವಾಲಿಯಾರ್‌ನ ಇಬ್ಬರು ಬಡ ಸೋದರರು ಸೈನ್ಯದಲ್ಲಿ ಸೇರ್ಪಡೆಗೊಂಡರು. ಅನಿರೀಕ್ಷಿತವಾಗಿ ಯುದ್ಧದಲ್ಲಿ ಅವರಿಗೆ ಎರಡು ಭಾರೀ ಬೆಲೆ ಬಾಳುವ ರತ್ನಗಳು ಲಭಿಸಿದವು. ಅವರು ಅದನ್ನು ಹಂಚಿಕೊಂಡರು. ಒಬ್ಬನು ತನ್ನ ರತ್ನ ಮಾರಿ ವ್ಯಾಪಾರವನ್ನಾರಂಭಿಸಿದನು ಮತ್ತು ಸೈನ್ಯವನ್ನು ತೊರೆದನು. ಇನ್ನೊಬ್ಬನು ತನಗೆ ದೊರೆತ ರತ್ನವನ್ನು ತನ್ನ ಮನೆಯವರಿಗೆ ಮುಟ್ಟಿಸಬೇಕೆಂದು ತನ್ನ ಸೋದರನಲ್ಲಿ ಕಳುಹಿಸಿಕೊಟ್ಟನು. ದಾರಿ ಮಧ್ಯದಲ್ಲಿ ಆತನ ಮನಸ್ಸು ಬದಲಾಯಿತು. ಆತನು ಎರಡನ್ನೂ ತನ್ನ ಬಳಿಯೇ ಇರಿಸಿದನು. ಕೆಲವು ದಿನಗಳ ನಂತರ ಆ ಸೋದರನು ರಜೆ ಪಡೆದು ಮನೆಗೆ ವಾಪಾಸಾದನು. ತನ್ನ ಪತ್ನಿಯೊಂದಿಗೆ ರತ್ನದ ಬಗ್ಗೆ ವಿಚಾರಿಸಿದಾಗ, ಅವಳು ಆಶ್ಚರ್ಯ ಚಕಿತಳಾದಳು. ಕಳುಹಿಸಿಕೊಟ್ಟ ಸೋದರನಲ್ಲಿ ವಿಚಾರಿಸಿದಾಗ ಆತನು 'ಅವಳಿಗೆ ತಲುಪಿಸಿದ್ದೇನೆ' ಎಂದನು. ಹೀಗೆ ಗೊಂದಲವುಂಟಾಗಿ ಪ್ರಕರಣವು ನ್ಯಾಯಾಲಯಕ್ಕೆ ತಲುಪಿತು. ಆ ಅಕ್ರಮಿ ಸೋದರನು ಇಬ್ಬರು ಕಳ್ಳ ಸಾಕ್ಷಿದಾರರನ್ನು ನಿಲ್ಲಿಸಿ ತೀರ್ಪನ್ನು ತನ್ನ ಪರವಾಗಿ ಮಾಡಿಕೊಂಡನು. ರತ್ನ ಕಳೆದು ಕೊಂಡವನ ಪತ್ನಿಯು ಅಕಾರಣವಾಗಿ ಆರೋಪ ಹೊತ್ತಳು. ಕೊನೆಗೆ ಅವಳು ರಾಜನ ಬಳಿ ಹೋಗಿ ತನ್ನ ಅಹವಾಲನ್ನು ವಿವರಿಸಿದಳು. ಇಬ್ಬರು ಸಾಕ್ಷಿದಾರರನ್ನು ಕರೆಸಿ ರಾಜನು ವಿಚಾರಿಸಿದನು. ಆದರೆ ಅವರು ಆತನಲ್ಲೂ ಸುಳ್ಳನ್ನೇ ಹೇಳಿದರು. ರಾಜನಿಗೆ ತೃಪ್ತಿಯಾಗಲಿಲ್ಲ. ಅವರ ವಿಚಾರಣೆಗೆ ಒಂದು ಹೊಸ ಉಪಾಯ ಹೂಡಿದನು. ಇಬ್ಬರು ಸಾಕ್ಷಿದಾರರಲ್ಲಿ, "ನೀವಿಬ್ಬರು ಆ ರತ್ನವನ್ನು ನೋಡಿದ್ದೀರಾ?" ಎಂದು ಪ್ರಶ್ನಿಸಿದನು. ಅದಕ್ಕವರು

ಹೌದೆಂದುತ್ತರಿಸಿದರು. ಆಗ ರಾಜನು ಮೇಣದ ಎರಡು ತುಂಡನ್ನು ಅವರ ಕೈಗಿತ್ತು ನೀವಿಬ್ಬರೂ ಬೇರೆಬೇರೆಯಾಗಿ ಆ ರತ್ನದ ರೂಪವನ್ನು ಮಾಡಿತನ್ನಿ ಎಂದನು. ಅವರು ಅದನ್ನು ಮಾಡಿತಂದಾಗ ಅದು ಬೇರೆಬೇರೆ ರೀತಿಯದ್ದಾಗಿತ್ತು. ಹೀಗೆ ಸಾಕ್ಷಿದಾರರು ಸುಳ್ಳುಗಾರರೆಂದು ತಿಳಿಯಿತು ಮತ್ತು ಅವರು ತಮ್ಮ ಅಪರಾಧವನ್ನು ಒಪ್ಪಿಕೊಂಡರು.

ದೇವನಿಷ್ಠೆ ಮತ್ತು ಪರಿಶುದ್ಧತೆಯಲ್ಲಿ ಸಿಕಂದರನು ತನ್ನ ತಂದೆಯನ್ನು ಮೀರಿದ್ದನು. ಇಸ್ಲಾಮಿನ ಕಡ್ಡಾಯ ಕರ್ತವ್ಯಗಳನ್ನು ಕಟ್ಟುನಿಟ್ಟಾಗಿ ಪಾಲಿಸುತ್ತಿದ್ದನು ಮತ್ತು ಇತರರಿಗೂ ಆ ಕುರಿತು ಉಪದೇಶಿಸುತ್ತಿದ್ದನು. ವಿದ್ವಾಂಸರನ್ನು ಅಪಾರವಾಗಿ ಗೌರವಿಸುತ್ತಿದ್ದನು. ಮಸೀದಿಗಳಲ್ಲಿ ಅವರ ಪ್ರವಚನದ ವ್ಯವಸ್ಥೆ ಮಾಡುತ್ತಿದ್ದನು ಮತ್ತು ಸ್ವತಃ ಅದರಲ್ಲಿ ಪಾಲ್ಗೊಳ್ಳುತ್ತಿದ್ದನು. ಶೀರಾಝ್ ಎಂಬಲ್ಲಿನ ಒಬ್ಬ ಹದೀಸ್ ವಿದ್ವಾಂಸ ಭಾರತಕ್ಕೆ ಆಗಮಿಸಿದ್ದರು. ಸಿಕಂದರನು ಆ ವಿದ್ವಾಂಸರನ್ನು ಹೃತ್ಪೂರ್ವಕವಾಗಿ ಸ್ವಾಗತಮಾಡಿ ರಾಜಧಾನಿಯ ಒಂದು ಮಸೀದಿಯಲ್ಲಿ ಹದೀಸ್ ಪ್ರವಚನದ ವ್ಯವಸ್ಥೆ ಮಾಡಿದನು. ಅದರಿಂದ ಬಹಳ ಕಾಲದ ವರೆಗೆ ಜನರು ಪ್ರಯೋಜನ ಪಡೆಯುತ್ತಿದ್ದರು.

ರಾಜನು ಸ್ವತಃ ಶರೀಅತನ್ನು ಪಾಲಿಸುತ್ತಿದ್ದು, ತತ್ವನಿಷ್ಠ ವ್ಯಕ್ತಿಯಾಗಿದ್ದನು. ಅಂತಹವರನ್ನು ಇಷ್ಟಪಡುತ್ತಿದ್ದನು. ಆದುದರಿಂದ ಆತನ ಅಧಿಕಾರಿಗಳಲ್ಲಿ ಹೆಚ್ಚಿನವರು ಅತ್ಯಂತ ಧರ್ಮನಿಷ್ಠರು ಮತ್ತು ಪ್ರಾಮಾಣಿಕರಾಗಿದ್ದರು. ರಾಜನ ಒಬ್ಬ ಅಧಿಕಾರಿಯಾಗಿದ್ದ ಝೈನುದ್ದೀನನ ಘಟನೆ ಹೀಗಿದೆ: ರಾಜನು ಯಾವುದೋ ಕಾರ್ಯನಿಮಿತ್ತ ಆತನನ್ನು ಬರಹೇಳಿದನು. ನಿರಂತರ ಮೂವರನ್ನು ಕಳುಹಿಸಿಯೂ ಝೈನುದ್ದೀನ್ ಬಾರದಿದ್ದಾಗ ಯಾರೋ ಒಬ್ಬ ದರಬಾರಿನಲ್ಲಿ ಈ ರೀತಿ ಹೇಳಿದನು, 'ಮಹಾರಾಜ, ಝೈನುದ್ದೀನ್ ತುಂಬಾ ಗರ್ವಿಯಾಗಿದ್ದಾನೆ. ಮೂರು ಬಾರಿ ತಾವು ಕರೆ ಕಳಿಸಿಯೂ ಬರಲಿಲ್ಲ ನೋಡಿ'. ಅದಕ್ಕೆ ರಾಜನು ಹೀಗೆ ಹೇಳಿದನು- 'ಆತ ಶುಕ್ರವಾರದಂದು ಎಲ್ಲಿಗೂ ಹೋಗುವುದಿಲ್ಲ ವೆಂದು ನನಗೆ ನೆನಪಿರಲಿಲ್ಲ. ಆತನು ಬಿಡುವು ಸಿಕ್ಕಾಗ ಖಂಡಿತಾ ಬರುವನು.'

ತನ್ನ ಅಧೀನ ಅಧಿಕಾರಿಗಳೊಂದಿಗೆ ಸಿಕಂದರನ ವರ್ತನೆ ಹೀಗಿತ್ತು. ಆದುದರಿಂದಲೇ ಅವರು ಸತ್ಯಸಂಧರೂ, ಪ್ರಾಮಾಣಿಕರೂ ಆಗಿದ್ದರು. ಸಿಕಂದರನ ಆ ಉತ್ತಮ ಕಾಲವು ಎಲ್ಲಾ ರೀತಿಯ ಕ್ಷೋಭೆಯಿಂದ ಮುಕ್ತವಾಗಿತ್ತು. ಪ್ರಜೆಗಳು ನೆಮ್ಮದಿ ಮತ್ತು ಸಂತೋಷದಿಂದಿದ್ದರು.

ಸಿಕಂದರನು ತನ್ನ ಮನೆಮಂದಿಯವರ ಮೇಲೂ ತೀವ್ರ ನಿಗಾ ಇಡುತ್ತಿದ್ದನು. ಕುಟುಂಬದ ಪ್ರತಿಯೊಬ್ಬ ಸದಸ್ಯನ ಬಗ್ಗೆ ಕಾಳಜಿ ವಹಿಸಿದ್ದನು. ಸಾಮಾನ್ಯ ತಪ್ಪುಗಳನ್ನೂ ವಿಚಾರಿಸುತ್ತಿದ್ದನು. ತನ್ನ ಮನೆಮಂದಿಯ ತಿಳುವಳಿಕೆ ಎಷ್ಟಿತ್ತೆಂದರೆ ಯಾವುದೋ ಜಿನ್ನ್ ಎಲ್ಲ ವಿಷಯಗಳನ್ನು ಆತನಿಗೆ ತಲುಪಿಸುತ್ತದೆ ಎಂದು ಹೆಚ್ಚಿನವರು ಭಾವಿಸುವಂತಿತ್ತು. ಆದರೆ ಇದು ರಾಜನ ಸೂಕ್ಷ್ಮತೆ, ಕರ್ತವ್ಯನಿಷ್ಠೆ, ದೇವಭಯದ ಕಾರಣವಾಗಿತ್ತು. ಮನೆಮಂದಿಯ ಕುರಿತು ದೂರು ಕೊಡಲು ಪ್ರಜೆಗಳಿಗೆ ಸ್ವಾತಂತ್ರ್ಯವಿತ್ತು ಮತ್ತು ಅಪರಾಧ ಸಾಬೀತಾದರೆ ಶಿಕ್ಷೆ ಕೊಡಲಾಗುತ್ತಿತ್ತು. ಆದುದರಿಂದ ಸಿಕಂದರನ ಕುಟುಂಬದ ಸದಸ್ಯರು ತಮ್ಮ ಬಗ್ಗೆ ದೂರುಕೊಡಲು ಬಹಳ ಕಡಿಮೆ ಅವಕಾಶ ನೀಡುತ್ತಿದ್ದರು.

## ಇಬ್ರಾಹೀಮ್ ಲೋದಿ

ಸಿಕಂದರ್ ಲೋದಿಯ ಮರಣಾನಂತರ ಆತನ ಮಗ ಇಬ್ರಾಹೀಮ್ ಲೋದಿ ಅಧಿಕಾರಕ್ಕೇರಿದನು. ಆತನೂ ತನ್ನ ತಂದೆಯಂತೆ ಧೈರ್ಯಶಾಲಿ ಮತ್ತು ದೃಢಚಿತ್ತನಾಗಿದ್ದನು. ಆದರೆ ಆತನ ಸ್ವಭಾವವು ಅಸಂತುಲಿತವಾಗಿತ್ತು. ಆತನ ಕೈಕೆಳಗಿರುವ ಹೆಚ್ಚಿನ ಅಧಿಕಾರಿಗಳು ಆತನೊಂದಿಗೆ ಉತ್ತಮವಾಗಿ ವರ್ತಿಸುತ್ತಿದ್ದರು. ಆದರೆ ಇಬ್ರಾಹೀಮ್ ಲೋದಿಯು ಅವರ ಜೊತೆ ಕಠಿಣವಾಗಿ ಮತ್ತು ಕೆಟ್ಟದಾಗಿ ವರ್ತಿಸಲಾರಂಭಿಸಿದನು. ಆತನ ವರ್ತನೆಯಿಂದ ಆಸ್ಥಾನಿಕರು ಮತ್ತು ಸೈನಿಕರು ಕುಪಿತರಾದರು. ಅವರು ಆತನನ್ನು ಅಧಿಕಾರದಿಂದ ಕೆಳಗಿಳಿಸುವ ತಂತ್ರ ಹೂಡತೊಡಗಿದರು. ಮೊದಲನೆಯದಾಗಿ ಅವರು ಆತನ ಕಿರಿಯ ಸೋದರನನ್ನು ಅಣ್ಣನ ವಿರುದ್ಧ ಪ್ರೇರೇಪಿಸಿದರು. ಆದರೆ ರಾಜನು ಆತನನ್ನು ದಮನಿಸಿ ತನ್ನ ವಿರುದ್ಧದ ಚಟುವಟಿಕೆಯನ್ನು ಕೊನೆಗೊಳಿಸಿದನು. ಇದರಿಂದಾಗಿ ವಿರೋಧಿಗಳು ಇನ್ನಷ್ಟು ಕೋಪಗೊಂಡರು. ಅನೇಕ ಪ್ರಾಂತ್ಯಗಳ ಮುಖಂಡರು ಬಂಡಾಯ ವೇಳಲಾರಂಭಿಸಿದರು. ಕೆಲವರು ತಮ್ಮನ್ನು ಸ್ವತಂತ್ರರೆಂದು ಘೋಷಿಸಿಕೊಂಡರು. ಇನ್ನು ಕೆಲವು ಪ್ರಭಾವಶಾಲಿಗಳು ದೆಹಲಿಯ ಸಾಮ್ರಾಜ್ಯವನ್ನೇ ನಾಶ ಮಾಡಲು ನಿರ್ಧರಿಸಿದರು.

ಅಫಘಾನಿಯರ ಆಂತರಿಕ ಕಲಹವು, ಬಂಡಾಯಗಾರರು ಮತ್ತು ಕ್ಷೋಭೆ ಹರಡುವವರಿಗೆ ಇಲ್ಲಿ ತಲೆ ಎತ್ತಲು ಅವಕಾಶ ಒದಗಿಸಿತು. ದೇಶದ ಹೆಚ್ಚಿನ ಭಾಗಗಳು ಸಮಾಜಘಾತುಕರ ಆಗಮನ ಕೇಂದ್ರವಾಯಿತು. ಭೋಪಾಲದ ಪೂರ್ಣಮಲ್ಲಿ ಎಂಬ ದರೋಡೆಕೋರನು ಎಷ್ಟು ಭಯಾನಕನಾಗಿದ್ದನೆಂದರೆ ಇಡೀ ಮಧ್ಯಭಾರತದ ಜನರು, ಪ್ರತಿಕ್ಷಣವೂ ಆತನು ತಮ್ಮ ಪ್ರಾಣ ಮತ್ತು ಸಂಪತ್ತಿಗೆ ಸಂಚಕಾರವೆಂದು ಭಾವಿಸತೊಡಗಿದರು. ದರೋಡೆ, ಕೊಲೆಪಾತದಿಂದ ಜನರು ಭಯ ಭೀತರಾಗಿದ್ದರು. ಇತ್ತ ರಜಪೂತರು ತಮ್ಮ ಪ್ರದೇಶವನ್ನು ಬೇರೆಯಾಗಿ ಮಾರ್ಪಡಿಸಿದ್ದರು. ಒಟ್ಟಿನಲ್ಲಿ ದೇಶವು ಅಶಾಂತಿಯ ಆಗರವಾಯಿತು.

## ಬಾಬರನ ಆಕ್ರಮಣ

ಇದೇ ಸಮಯದಲ್ಲಿ ಇತ್ತ ಕಾಬೂಲಿನಲ್ಲಿ ಅನಿರೀಕ್ಷಿತವಾಗಿ ತೈಮೂರನ ಮೊಮ್ಮಗನ ಮೊಮ್ಮಗನಾದ ಬಾಬರನು ಕಾಬೂಲನ್ನು ವಶಪಡಿಸಿಕೊಂಡನು. ಲೋದಿಗಳಿಗೆ ಮೊಗಲರೊಂದಿಗಿದ್ದ ಸಾಂಪ್ರದಾಯಿಕ ಶತ್ರುತ್ವವು ಬಾಬರನ ಜೊತೆಗೂ ಮುಂದುವರಿಯಿತು. ದೆಹಲಿಯ ಸಾಮ್ರಾಜ್ಯವನ್ನು ಬಾಬರನು ತನ್ನ ಪೂರ್ವಜರ ವಾರೀಸು ಸೊತ್ತೆಂದು ಪರಿಗಣಿಸಿದ್ದನು. ಆದರೆ ದೆಹಲಿಯಲ್ಲಿರುವ ಲೋದಿಗಳೊಂದಿಗೆ ಯುದ್ಧ ಮಾಡುವ ಧೈರ್ಯ ಆತನಿಗಿರಲಿಲ್ಲ. ಇದೇ ಸಂದರ್ಭದಲ್ಲಿ ಇಬ್ರಾಹೀಮ್ ಲೋದಿಯ ಸೋದರ ಮಗನಾದ ಅಲ್ಲಾವುದ್ದೀನ್ ಖಿಲ್ಜಿಯು ದೆಹಲಿಯ ಅಧಿಕಾರವನ್ನು ಬಯಸಿದ್ದನು ಮತ್ತು ಬಾಬರನಿಂದ ಸಹಾಯ ಕೇಳಲು ಕಾಬೂಲ್‌ಗೆ

ತೆರಳಿ ತನ್ನ ಸೋದರನ ಮೇಲೆ ದಾಳಿ ಮಾಡಲು ಪ್ರೇರೇಪಿಸಿದನು. ಬಾಬರನು ದಾಳಿ ನಡೆಸಲು ತಯಾರಾದನು. ಆದರೆ ಚೀನಾಬ್ ಪರ್ವತಗಳಿಂದ ಮುಂದೆ ಸಾಗಲು ಆತನಿಂದ ಸಾಧ್ಯವಾಗಲಿಲ್ಲ.

## ಮೊದಲ ಪಾಣಿಪತ ಕದನ: 1526

ಪಂಜಾಬ್‌ನ ಮುಂದಾಳು ದೌಲತ್‌ಖಾನನು ಇಬ್ರಾಹೀಮ್ ಲೋದಿಯ ವಿರುದ್ಧ ಬಂಡಾಯವೆದ್ದು ಬಾಬರನನ್ನು ದಾಳಿಗೆ ಪ್ರೇರೇಪಿಸಿದನು ಮತ್ತು ತನ್ನ ಕಡೆಯಿಂದ ಎಲ್ಲಾ ರೀತಿಯ ಸಹಾಯದ ವಾಗ್ದಾನ ಮಾಡಿದನು. ಮೇವಾಡ್‌ನ ರಜಪೂತ ಸರದಾರ ರಾಣಾಸಿಂಗನೂ ಇಬ್ರಾಹೀಮ್ ಲೋದಿಯನ್ನು ದ್ವೇಷಿಸುತ್ತಿದ್ದನು ಮತ್ತು ದೆಹಲಿಯ ಅಧಿಕಾರದ ಕನಸು ಕಾಣುತ್ತಿದ್ದನು. ಆದುದರಿಂದ ಬಾಬರನಿಗೆ ದಾಳಿ ಮಾಡುವ ಆಹ್ವಾನ ನೀಡಲು ದೌಲತ್ ಖಾನನ ಜೊತೆ ಆತನೂ ಸೇರಿಕೊಂಡನು. ಬಾಬರನು ಮೊದಲೇ ದಾಳಿ ಮಾಡಲು ಕಾಯುತ್ತಿದ್ದನು. ಅವಕಾಶ ದೊರೆಯುತ್ತಲೇ ಒಂದು ಬಲಿಷ್ಠ ಸೈನ್ಯವನ್ನು ಕಟ್ಟಿಕೊಂಡು ಕಾಬೂಲಿನಿಂದ ಹೊರಟನು. ದಾರಿಯಲ್ಲಿ ಪ್ರತಿರೋಧಿಸಿ ದವರನ್ನು ದಮನಿಸುತ್ತಾ ಸುಲಭದಲ್ಲಿ ದೆಹಲಿ ಸಮೀಪ ತಲುಪಿದನು. ಇಬ್ರಾಹೀಮ್ ಲೋದಿಯು ತನ್ನ ಎಲ್ಲ ಸಾಮರ್ಥ್ಯವನ್ನು ಬಳಸಿ ಒಂದು ಲಕ್ಷ ಸೈನಿಕರನ್ನು ತರಬೇತು ಗೊಳಿಸಿ, ಯುದ್ಧಕ್ಕೆ ಸನ್ನದ್ಧಗೊಳಿಸಿದನು. 1526ರಲ್ಲಿ ಪಾಣಿಪತ ಎಂಬಲ್ಲಿ ಘೋರ ಕಾಳಗ ಆರಂಭವಾಯಿತು. ಬಾಬರನ ಸೈನ್ಯವು ನವೀನ ಅಸ್ತ್ರಗಳು ಮತ್ತು ತೋಪು ಗಳಿಂದ ಕೂಡಿರಲಿಲ್ಲ. ಆದರೆ ದೇಶವಾಸಿಗಳೇ ಇಬ್ರಾಹೀಮ್ ಲೋದಿಯ ವಿರುದ್ಧ ವಾದುದರಿಂದ ಸೋಲು ನಿಶ್ಚಯವಾಗಿತ್ತು. ಆತನು ತನ್ನ ಹದಿನೈದು ಸಾವಿರ ಸೈನಿಕ ರೊಂದಿಗೆ ಹೋರಾಡುತ್ತಾ ಸಾವನ್ನಪ್ಪಿದನು. ಪ್ರಾಮಾಣಿಕ, ಕರ್ತವ್ಯನಿಷ್ಠ, ದೇವಭಕ್ತರಾದ ಸರದಾರರು ಆಳಿದ ಈ ದೇಶ ಮತ್ತೆ ಬಂಡಾಯಗಾರರು, ದೇಶದ್ರೋಹಿಗಳು ಮತ್ತು ಸ್ವಾರ್ಥಿಗಳಿಂದಾಗಿ ಅರಾಜಕತೆಗೆ ತಳ್ಳಲ್ಪಟ್ಟಿತು. ಅಳಿದುಳಿದ ಕೆಲವು ಸರದಾರರು ಸಿಕಂದರ ಮತ್ತು ಜೋನ್‌ಪುರದಲ್ಲಿ ಛಿದ್ರಗೊಂಡಿದ್ದ ಸೈನ್ಯವನ್ನು ಪುನಃ ಸಂಘಟಿಸಿ ಹೋರಾಟ ನಡೆಸಿದರು. ಆದರೆ ದೇವನು ಈ ದೇಶದ ವಿಧಿಯನ್ನು ಬೇರೆಯೇ ನಿರ್ಧರಿಸಿದ್ದನು.

## ಪ್ರಶ್ನೆಗಳು

1. ಸಿಕಂದರ್ ಲೋದಿ ಯಾರು? ಆತನು ತನ್ನ ಯಾವ ಗುಣಗಳಿಂದ ದೆಹಲಿ ಸಾಮ್ರಾಜ್ಯದ ಒಡೆಯನಾದನು?
2. ಸಿಕಂದರ್‌ನ ಸೋದರನಾದ ಬಾರ್‌ಬಕನ ವರ್ತನೆಯೇನು? ಆತನ ಜೊತೆ ಸಿಕಂದರನು ಹೇಗೆ ವರ್ತಿಸಿದನು?
3. ಸಿಕಂದರನ ಶಿಸ್ತು ಮತ್ತು ನ್ಯಾಯದ ಕುರಿತು ನೀವು ಏನು ತಿಳಿದು ಕೊಂಡಿದ್ದೀರಿ? ಇಬ್ಬರು ಸೋದರರ ಜಗಳವನ್ನು ಆತನು ಹೇಗೆ ಬಗೆಹರಿಸಿದನು?
4. ಸಿಕಂದರ್ ಲೋದಿಯ ಜೀವನ ಮತ್ತು ವ್ಯಕ್ತಿತ್ವದ ಮೇಲೆ ಬೆಳಕು ಚೆಲ್ಲಿ.

5. ಸಿಕಂದರನ ಆಡಳಿತ ವ್ಯವಸ್ಥೆಯ ಕುರಿತು ನೀವು ಏನು ತಿಳಿದಿದ್ದೀರಿ?
6. ಝೈನುದ್ದೀನನ ಕುರಿತ ಘಟನೆಯೇನು? ಈ ಘಟನೆ ಅವರಿಬ್ಬರ ಯಾವ ಗುಣಗಳ ಮೇಲೆ ಬೆಳಕು ಚೆಲ್ಲುತ್ತವೆ?
7. ಇಬ್ರಾಹೀಮ್ ಲೋದಿ ಯಾರು? ಆತನ ಕುರಿತು ಅಫಘಾನ್ ಮುಖಂಡರು ಮತ್ತು ಬಂಧುಗಳು ಏಕೆ ಅಸಂತುಷ್ಟರಾಗಿದ್ದರು?
8. ಬಾಬರನು ಏಕೆ ಆಕ್ರಮಣ ಮಾಡಿದನು?
9. ಮೊದಲ ಪಾಣಿಪತ ಕದನದ ಕುರಿತು, ಈ ಕೆಳಗಿನ ವಿಷಯಗಳನ್ನು ಗಮನದಲ್ಲಿರಿಸಿ ಪ್ರಬಂಧ ಬರೆಯಿರಿ.

   ಹೆಸರು, ಸ್ಥಳ, ಇಸವಿ, ಭಾಗವಹಿಸಿದವರು, ಕಾರಣಗಳು, ಘಟನೆಗಳು, ಪರಿಣಾಮ.
10. ಈ ಕೆಳಗಿನ ಇಸವಿಗಳು ಏಕೆ ಪ್ರಸಿದ್ಧವಾಗಿವೆ:

    1386, 1451, 1492, 1498, 1517, 1526.

# ಅಧ್ಯಾಯ - 6

## ಸ್ವತಂತ್ರ ಪ್ರಾಂತ್ಯಗಳು

ಭಾರತದಂತಹ ವಿಶಾಲ ದೇಶವನ್ನು ಒಂದೇ ಕೇಂದ್ರ ಆಡಳಿತಕ್ಕೆ ತರುವುದು ಬಹಳ ಕಷ್ಟದ ಕೆಲಸ. ಏಕವ್ಯಕ್ತಿ ಆಡಳಿತದಲ್ಲಿ ರಾಜರುಗಳಿಗೆ ಈ ಸಮಸ್ಯೆಯು ತಲೆನೋವಾಗಿ ಪರಿಣಮಿಸಿತ್ತು. ಸಾವಿರಾರು ಮೈಲು ವಿಸ್ತಾರವಿರುವ, ಕೋಟಿಗಟ್ಟಲೆ ಪ್ರಜೆಗಳನ್ನೊಳಗೊಂಡ ಈ ಉಪಭೂಖಂಡದ ವಿಶಾಲತೆ, ಇಲ್ಲಿನ ಜನರ ಭಾಷೆ, ಬಣ್ಣ, ಸಂಸ್ಕೃತಿ, ಜೀವನ ಶೈಲಿ, ವಿಶ್ವಾಸ ಮತ್ತು ಆಚರಣೆಗಳ ವೈವಿಧ್ಯತೆಯಿಂದ ವಿವಿಧ ಭಾಗದ ಜನರಲ್ಲಿ ಪ್ರತ್ಯೇಕತೆಯ ಕೂಗು ಕೇಳಲಾರಂಭಿಸಿತು. ಇನ್ನೊಂದೆಡೆ ಈ ದೇಶದ ಸಂಪತ್ತು ಮತ್ತು ಐಶ್ವರ್ಯದ ಕುರಿತು ಕೇಳಿಕೇಳಿ ಹೊರದೇಶದಿಂದ ಆಕ್ರಮಣಕಾರರು ಈ ದೇಶದ ಸಂಪತ್ತನ್ನು ದೋಚಲು ಹಾತೊರೆಯುತ್ತಿದ್ದರು. ಇಂತಹ ಪರಿಸ್ಥಿತಿಯಲ್ಲಿ ಇಡೀ ದೇಶದ ಪ್ರಜೆಗಳನ್ನು ಒಂದೇ ರೀತಿಯಲ್ಲಿ ಮುನ್ನಡೆಸುವುದು ಮತ್ತು ದೇಶವನ್ನು ಹೊರಗಿನ ಆಕ್ರಮಣದಿಂದ ರಕ್ಷಿಸುವುದು ಕಷ್ಟಕರವಾಗಿತ್ತು. ಮುಸ್ಲಿಮ್ ರಾಜರು ತಮ್ಮ ಆಡಳಿತಾವಧಿಯಲ್ಲಿ, ಯಾವುದೇ ರೀತಿಯಲ್ಲಾದರೂ ಈ ಉಪಭೂಖಂಡದಲ್ಲಿ ತಮ್ಮ ಕೇಂದ್ರಾಡಳಿತ ನಡೆಸಲು ಪ್ರಯತ್ನಿಸುತ್ತಿದ್ದರು ಮತ್ತು ಸರಹದ್ದುಗಳನ್ನು ಬಲಗೊಳಿಸಿದುದರಿಂದ ಆಕ್ರಮಣಕಾರರಿಗೆ ಮುನ್ನುಗ್ಗಲು ಧೈರ್ಯ ಬರುತ್ತಿರಲಿಲ್ಲ. ತನ್ನ ಹೆಚ್ಚಿನ ಸೈನಿಕ ಶಕ್ತಿಯನ್ನು ಗಡಿರೇಖೆ ಬಲಗೊಳಿಸಲು ನಿಯುಕ್ತಗೊಳಿಸುತ್ತಿದ್ದರು. ದೇಶದ ಆಂತರಿಕ ಒಗ್ಗಟ್ಟನ್ನು ಬಲಗೊಳಿಸಲು ದೂರದೂರದ ಪ್ರಾಂತ್ಯಗಳಲ್ಲಿ ತಮ್ಮ ಹತ್ತಿರದ ಸಂಬಂಧಿಯನ್ನು ಅಥವಾ ತಮ್ಮ ನಿಷ್ಠಾವಂತರನ್ನು

ನೇಮಿಸುತ್ತಿದ್ದರು. ಹೆಚ್ಚಿನ ಸೂಕ್ಷ್ಮತೆಗಾಗಿ ಅವರು ತಮ್ಮ ಕುಟುಂಬದ ಸದಸ್ಯರನ್ನು ರಾಜಧಾನಿಯಲ್ಲೇ ಇರಲು ನಿರ್ಬಂಧಿಸುತ್ತಿದ್ದರು. ಆದರೂ ಕೇಂದ್ರದಲ್ಲಿ ಸಣ್ಣ ಸಮಸ್ಯೆ ಕಂಡು ಬಂದರೆ ಅಥವಾ ಹೊರಗಿನಿಂದ ಆಕ್ರಮಣಕ್ಕೆ ಯಾರಾದರೂ ಮುಂದಾದರೆ ದೂರದ ಪ್ರಾಂತ್ಯಗಳು ತಕ್ಷಣ ತಮ್ಮ ಸ್ವಾತಂತ್ರ್ಯ ಘೋಷಿಸಲು ಪ್ರಯತ್ನಿಸುತ್ತಿದ್ದವು. ರಸ್ತೆಗಳು, ವಾಹನ ಸೌಕರ್ಯ, ರೈಲು ವ್ಯವಸ್ಥೆ, ಅಂಚೆ ವ್ಯವಸ್ಥೆ ಇಲ್ಲದ ಆ ಕಾಲದಲ್ಲಿ ದೇಶವನ್ನು ನಿಯಂತ್ರಣದಲ್ಲಿಡುವುದು ಬಹಳ ಕಷ್ಟದಾಯಕವಾಗಿತ್ತು. ಆದುದರಿಂದಲೇ ಅನೇಕ ರಾಜರು ತಮ್ಮ ಸೈನಿಕ ಬಲದಿಂದ ಅನೇಕ ಪ್ರದೇಶಗಳನ್ನು ತಮ್ಮದಾಗಿಸಿಕೊಂಡರೂ ಹೆಚ್ಚು ಕಾಲದ ವರೆಗೆ ತಮ್ಮ ಆಡಳಿತವನ್ನು ಉಳಿಸಲು ಮತ್ತು ತಮ್ಮ ಅಧೀನವಿರುವ ಪ್ರದೇಶಗಳಲ್ಲಿ ಶಾಂತಿ ಮತ್ತು ಸುವ್ಯವಸ್ಥೆ ಕಾಪಾಡಲು ಸಾಧ್ಯವಾಗಲಿಲ್ಲ.

ಮುಹಮ್ಮದ್ ತುಗಲಕನ ಆಡಳಿತದ ಫೈರೋಝ್ ತುಗಲಕನ ನಿಷ್ಠೆ ಮತ್ತು ಸಂಧಾನ ಧೋರಣೆಯಿಂದ ಅವರಿಗೆ ಇನ್ನಷ್ಟು ಪ್ರೇರಣೆ ಸಿಕ್ಕಿತು. ತೈಮೂರನ ಆಕ್ರಮಣ ದಿಂದ ದೆಹಲಿಯ ಅಳಿದುಳಿದ ಆಡಳಿತವೂ ಕೊನೆಗೊಂಡಾಗ ಅನೇಕರು ತಮ್ಮ ಸ್ವತಂತ್ರ ಪ್ರಾಂತ್ಯವನ್ನು ರಚಿಸಿ ದರು. ಅದರಲ್ಲಿ ದಕ್ಷಿಣ ಭಾರತದ ಬಹಮನಿ ಸಾಮ್ರಾಜ್ಯ, ಜೋನ್‌ಪುರದ ಶರ್ಕಿ ಸಾಮ್ರಾಜ್ಯ, ಗುಜರಾತ್, ಮಾಳ್ವ ಮತ್ತು ಬಂಗಾಳದ ಸ್ವತಂತ್ರ ಸಾಮ್ರಾಜ್ಯಗಳು ಪ್ರಸ್ತಾಪನೀಯವಾಗಿವೆ.

## ಬಹಮನಿ ಸಾಮ್ರಾಜ್ಯ

ದಕ್ಷಿಣ ಭಾರತದ ಈ ಮುಸ್ಲಿಮ್ ಸಾಮ್ರಾಜ್ಯದ ಸ್ಥಾಪಕನು ಹಸನ್‌ಗಂಗೂ ಬಹಮನನಾಗಿದ್ದಾನೆ. ಮುಹಮ್ಮದ್ ತುಗಲಕನು ತನ್ನ ಆಡಳಿತದ ಕೊನೆಯ ದಿನಗಳಲ್ಲಿ ದಕ್ಷಿಣಭಾರತದ ಬರಗಾಲ ಪೀಡಿತ ಜನರಿಗೆ ಪರಿಹಾರ ಮತ್ತು ಗುಜರಾತ್‌ನ ಕೋಲಾಹಲವನ್ನು ನಿಗ್ರಹಿಸುವುದರಲ್ಲಿದ್ದನು. ಆತನ ವಿರೋಧಿ ನಾಯಕರು ದೌಲತಾಬಾದ್ ಮತ್ತು ಇತರ ಪ್ರದೇಶಗಳಲ್ಲಿ ಛಿದ್ರತೆ ಮತ್ತು ಅಶಾಂತಿ ಹರಡಿದರು. ರಾಜನು ಅವರನ್ನು ಹತ್ತಿಕ್ಕಲು ತನ್ನ ನಂಬಿಗಸ್ತ ನಾಯಕ ಝುಫರ್‌ಖಾನನನ್ನು ನೇಮಿಸಿದನು. ಆದರೆ ಆತನು ದ್ರೋಹ ಬಗೆದು ಹಸನ್ ಬಹಮನ್ ಎಂಬ ಹೆಸರಿನಲ್ಲಿ ಸ್ವತಃ ರಾಜ ಪಟ್ಟವನ್ನು ಅಲಂಕರಿಸಿದನು. ಹೀಗೆ 1347ರಲ್ಲಿ ಬಹಮನಿ ಸಾಮ್ರಾಜ್ಯದ ಬುನಾದಿ ಹಾಕಿದನು ಮತ್ತು ಗುಲ್ಬರ್ಗಾವನ್ನು ತನ್ನ ರಾಜಧಾನಿಯಾಗಿಸಿದನು. ಈ ಸಾಮ್ರಾಜ್ಯವು ಅನೇಕ ಕಾಲದ ವರೆಗೆ ದಕ್ಷಿಣ ಭಾರತದ ಪ್ರಖ್ಯಾತ ಹಿಂದೂ ರಾಜ್ಯವಾದ ವಿಜಯನಗರದ ರಾಜರೊಂದಿಗೆ ಜಗಳಾಡುತ್ತಿತ್ತು.

## ಮುಹಮ್ಮದ್ ಗವಾನ್

ಬಹಮನಿ ಸುಲ್ತಾನರಲ್ಲಿ ಮುಹಮ್ಮದ್ ಗವಾನ್ ಎಂಬ ಹೆಸರುವಾಸಿಯಾದ ಮಂತ್ರಿ ಯೊಬ್ಬನಿದ್ದನು. ಆತನು ತನ್ನ ಪ್ರಾಮಾಣಿಕತೆ, ನಿಷ್ಠೆ, ದೇವಭಯ ಮತ್ತು

ಕಠಿಣ ಶ್ರಮಕ್ಕೆ ಹೆಸರುವಾಸಿಯಾಗಿದ್ದನು. ಯಾವಾಗಲೂ ಪ್ರಜೆಗಳ ಕ್ಷೇಮಾಭಿವೃದ್ಧಿಯ ಬಗ್ಗೆಯೇ ಚಿಂತಿಸುತ್ತಿದ್ದನು. ಅತ್ಯಂತ ಸರಳ ಮತ್ತು ಪರಿಶುದ್ಧ ಜೀವನ ಸಾಗಿಸಿದನು. ಚಾಪೆಯಲ್ಲಿ ಮಲಗುತ್ತಿದ್ದನು. ಮಣ್ಣಿನ ಬಟ್ಟಲಲ್ಲಿ ಉಣ್ಣುತ್ತಿದ್ದನು. ಬಡವರ ಮತ್ತು ನಿರ್ಗತಿಕರ ಕಡೆಗೆ ವಿಶೇಷ ಗಮನಹರಿಸುತ್ತಿದ್ದನು. ಬೀದರ್‌ನಲ್ಲಿ ಆತನು ಒಂದು ಸುಂದರ ಮದ್ರಸವನ್ನು ಸ್ಥಾಪಿಸಿದನು. ಸ್ವತಃ ವಿದ್ಯಾರ್ಥಿಯಂತೆ ತರಗತಿಗಳಿಗೆ ಹಾಜರಾಗುತ್ತಿದ್ದನು. ಆತನಿಗೆ ಅಧ್ಯಯನದಲ್ಲಿ ತೀವ್ರ ಆಸಕ್ತಿಯಿತ್ತು. ಆತನ ಸ್ವಂತ ಗ್ರಂಥಾಲಯದಲ್ಲಿ ಮೂರು ಸಾವಿರಕ್ಕೂ ಮಿಕ್ಕಿ ಪುಸ್ತಕಗಳಿದ್ದುವು. ಈ ಗ್ರಂಥಾಲಯವನ್ನು ಆತನು ಬೀದರ್‌ನ ಮದ್ರಸಕ್ಕಾಗಿ ಬಿಟ್ಟುಕೊಟ್ಟನು. ಆತನು ನಿರ್ಮಿಸಿದ ಮದರಸ ಇಂದಿಗೂ ಮೋಹಕವಾಗಿ ನೆಲೆನಿಂತಿದೆ.

## ಬಹಮನಿ ಸಾಮ್ರಾಜ್ಯದ ಕೊನೆ

1524ರಲ್ಲಿ ಬಹಮನಿ ಸಾಮ್ರಾಜ್ಯದ ಕೊನೆಯ ರಾಜನ ಮರಣದೊಂದಿಗೆ ಸಾಮ್ರಾಜ್ಯವು 5 ಭಾಗಗಳಾಗಿ ವಿಂಗಡಿಸಲ್ಪಟ್ಟಿತು. ಕೊನೆಯ ಘಟ್ಟದಲ್ಲಿ ಗುಜರಾತ್, ಉತ್ತರ ಭಾರತ, ಬಂಗಾಳ, ಮುಂತಾದ ದೂರದ ಪ್ರಾಂತ್ಯಗಳು ಸ್ವತಂತ್ರವಾಗುವ ಚಿಂತೆಯಲ್ಲಿತ್ತು.

1. ಅಹ್ಮದ್ ನಗರ. 2. ಗೋಲ್‌ಕೊಂಡ. 3. ಬಿಜಾಪುರ. 4. ಬೀದರ್. 5. ಬಿರಾರ್. ಅನೇಕ ಕಾಲದವರೆಗೆ ಈ ಸಣ್ಣಸಣ್ಣ ರಾಜ್ಯಗಳು ಸ್ವತಂತ್ರ್ಯವಾಗಿದ್ದುವು. ಕೊನೆಗೆ ಮೊಗಲ್ ರಾಜರು ವಿಶೇಷವಾಗಿ ಔರಂಗಝೇಬನು ಈ ಸಾಮ್ರಾಜ್ಯಗಳನ್ನು ಕೊನೆಗೊಳಿಸಿ ದೆಹಲಿ ಸಾಮ್ರಾಜ್ಯಕ್ಕೆ ಸೇರಿಸಿದನು.

**ಜೋನ್‌ಪುರ:** 1360ರಲ್ಲಿ ಫೈರೋಝ್ ತುಗಲಕನು ಬಂಗಾಳದಿಂದ ವಾಪಾಸಾಗುವಾಗ ಗೋಮತಿ ತಟದಲ್ಲಿ ಒಂದು ಸುಂದರ ನಗರವನ್ನು ನಿರ್ಮಿಸಿದನು. ಆ ನಗರಕ್ಕೆ ಮುಹಮ್ಮದ್ ತುಗಲಕನ ನಿಜ ಹೆಸರಾದ ಜೋನಾಖಾನನ ನೆನಪಿಗಾಗಿ 'ಜೋನಾಪುರ' ಎಂದು ಹೆಸರಿಟ್ಟನು. ಅದು ಅಪಭ್ರಂಶಗೊಂಡು ನಂತರ 'ಜೋನ್‌ಪುರ' ಎಂದು ಪ್ರಸಿದ್ಧವಾಯಿತು. ತುಘಲಕ್ ಸರದಾರರ ಶರ್ಕಿ ಪ್ರಾಂತ್ಯಕ್ಕೆ ಇದುವೇ ರಾಜಧಾನಿಯಾಗಿತ್ತು. ತೈಮೂರನ ಆಕ್ರಮಣದಿಂದಾಗಿ ದೆಹಲಿ ಸಾಮ್ರಾಜ್ಯವು ಕ್ಷೀಣಗೊಂಡಾಗ 1398ರಲ್ಲಿ ಇಲ್ಲಿನ ಪ್ರಾಂತ್ಯದ ಸರದಾರನಾಗಿದ್ದ ಖ್ವಾಜಾ ಜಹಾನನು ಪ್ರಾಂತ್ಯದ ಸ್ವಾತಂತ್ರ್ಯವನ್ನೂ ಘೋಷಿಸಿದನು. ಈಗ ಜೋನ್‌ಪುರ ಪ್ರಾಂತ್ಯವು ಶರ್ಕಿ ಸಾಮ್ರಾಜ್ಯವಾಯಿತು. ಇಲ್ಲಿನ ರಾಜರಲ್ಲಿ ಇಬ್ರಾಹೀಮ್ ಷಾ ಶರ್ಕಿಯು ಖ್ಯಾತನಾಗಿದ್ದನು. ಆತನು ತನ್ನ ಸಾಮ್ರಾಜ್ಯವನ್ನು ವಿಶಾಲಗೊಳಿಸಿದ್ದನು. ಶಿಕ್ಷಣ ಮತ್ತು ಕಲಾ ಪ್ರೇಮಿಯಾಗಿದ್ದನು. ಆತನ ಕಾಲದಲ್ಲಿ ಜೋನ್‌ಪುರ ಶಿಕ್ಷಣ ಮತ್ತು ಕಲೆಯ ಮುಖ್ಯ ಕೇಂದ್ರವಾಗಿತ್ತು ಮತ್ತು ಬಹುಕಾಲದ ವರೆಗೆ ಅದಕ್ಕೆ ಹೆಸರುವಾಸಿಯಾಗಿತ್ತು. ತೈಮೂರನ ದಾಳಿಯಿಂದ ದೆಹಲಿಯು ಧ್ವಂಸಗೊಂಡಾಗ ಅಲ್ಲಿನ ಪಂಡಿತರು ಜೋನ್‌ಪುರಕ್ಕೆ ಓಡಿ ಹೋದರು. ಇಬ್ರಾಹೀಮ್ ಲೋದಿಯು ಅವರ ಜೊತೆ ಉತ್ತಮವಾಗಿ ವರ್ತಿಸಿದನು. ಆತನು ಕಟ್ಟಡ ನಿರ್ಮಾಣದಲ್ಲೂ

ಆಸಕ್ತಿ ಹೊಂದಿದ್ದನು. ಆತನು ನಿರ್ಮಿಸಿದ ಅಟಾಲದ ಮಸೀದಿ ಇಂದಿಗೂ ಪ್ರಸಿದ್ಧವಿದೆ. ಇಲ್ಲಿನ ಸರದಾರರಿಗೆ ದೆಹಲಿಯ ರಾಜರೊಂದಿಗೆ ಆಗಾಗ ಜಗಳವಾಗುತ್ತಿತ್ತು. 1476ರಲ್ಲಿ ಬಹಲೂಲ್ ಲೋದಿಯು ಜೋನ್‌ಪುರದ ರಾಜನಾಗಿದ್ದ ಹುಸೈನ್‌ಷಾ ಶರ್ಕಿಯನ್ನು ಸೋಲಿಸಿ ಜೋನ್‌ಪುರದ ಸಾಮ್ರಾಜ್ಯವನ್ನು ದೆಹಲಿಗೆ ವಿಲೀನಗೊಳಿಸಿದನು.

**ಮಾಳ್ವ:** 1401ರಲ್ಲಿ ಫೈರೋಝ್ ತುಗಲಕನ ಒಬ್ಬ ಜಾಗೀರುದಾರನಾದ ದಿಲಾವರ್ ಖಾನನು ಮಾಳ್ವದಲ್ಲಿ ಒಂದು ಸ್ವತಂತ್ರ ಸಾಮ್ರಾಜ್ಯವನ್ನು ಸ್ಥಾಪಿಸಿದನು. 'ಮಾಂಡು' ಆತನ ರಾಜಧಾನಿಯಾಗಿತ್ತು. ಇಲ್ಲಿನ ರಾಜರುಗಳಲ್ಲಿ ರಾಜ ಮಹ್ಮೂದ್ ಪ್ರಖ್ಯಾತನಾಗಿದ್ದಾನೆ. ಆತ ಶೂರನೂ, ಶಿಸ್ತು ಮತ್ತು ನ್ಯಾಯಪ್ರಿಯನೂ ಆಗಿದ್ದನು. ಆತನ ಕಾಲದಲ್ಲಿ ಮಾಳ್ವವು ಬಹಳ ಅಬಿವೃದ್ಧಿ ಹೊಂದಿತ್ತು. ಪ್ರಜೆಗಳು ಶಾಂತಿ ಮತ್ತು ನೆಮ್ಮದಿಯಿಂದಿದ್ದರು. ಮಾಳ್ವ ಅನೇಕ ಕಾಲದ ವರೆಗೆ ಸ್ವತಂತ್ರವಾಗಿತ್ತು. 1531ರಲ್ಲಿ ಗುಜರಾತ್‌ನ ಆಡಳಿತಾಧಿಕಾರಿ ಬಹದ್ದೂರ್ ಷಾನು ಆತನನ್ನು ಸೋಲಿಸಿ ಮಾಳ್ವವನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು.

**ಗುಜರಾತ್:** 1401ರಲ್ಲಿ ಫೈರೋಝ್ ತುಗಲಕನ ಇನ್ನೊಬ್ಬ ಜಾಗೀರುದಾರ ನಾಗಿದ್ದ ಝುಫರ್‌ಖಾನನು ಗುಜರಾತ್‌ನಲ್ಲಿ ತನ್ನ ಸ್ವಾತಂತ್ರ್ಯವನ್ನು ಘೋಷಿಸಿದನು. ಇಲ್ಲಿನ ಆಡಳಿತಗಾರರಲ್ಲಿ ಅಹ್ಮದ್‌ಷಾನು ಪ್ರಖ್ಯಾತನಾಗಿದ್ದನು. ಧೈರ್ಯ, ಆಡಳಿತ ದಕ್ಷತೆ, ಶಿಸ್ತು, ನ್ಯಾಯ ಮತ್ತು ಇಸ್ಲಾಮಿನ ವಾಹಕನಾಗಿ ಹೆಸರುವಾಸಿಯಾಗಿದ್ದನು. ಒಮ್ಮೆ ಆತನ ಹತ್ತಿರದ ಸಂಬಂಧಿಯೊಬ್ಬನು ಒಬ್ಬ ನಿರಪರಾಧಿಯನ್ನು ಕೊಂದು ಹಾಕಿದನು. ಅಹ್ಮದ್‌ಷಾನು ಆ ಸಂಬಂಧಿಕನನ್ನು ಗಲ್ಲಿಗೇರಿಸಿದನು. ಇದರಿಂದಾಗಿ ಆತನ ಕಾಲದಲ್ಲಿ ಯಾವುದೇ ನಾಯಕನಿಗೆ ಬಡವರು ಮತ್ತು ಅಸಹಾಯಕರಿಗೆ ಅನ್ಯಾಯ ಮಾಡುವ ಧೈರ್ಯವಿರಲಿಲ್ಲ. ಸುಂದರವಾದ ಅಹ್ಮದಾಬಾದ್ ನಗರವನ್ನು ಈತನೇ ನಿರ್ಮಿಸಿದ್ದನು.

ಮಹ್ಮೂದ್ ಗುಜರಾತನ್ನು ಆಳಿದ ಇನ್ನೊಬ್ಬ ಖ್ಯಾತ ಆಡಳಿತಗಾರನಾಗಿದ್ದ. ಆತನು ಸುದೀರ್ಘ ಐವತ್ತೆರಡು ವರ್ಷಗಳ ತನಕ ಯಶಸ್ವಿಯಾಗಿ ಆಳಿದನು. ಆತನು ಧೈರ್ಯ ಶಾಲಿಯೂ, ಹೃದಯ ಸಂವೇದನೆಯುಳ್ಳವನೂ, ಉದಾರಿಯೂ ಆಗಿದ್ದನು. ಇಸ್ಲಾಮಿ ಶಿಷ್ಟಾಚಾರಗಳನ್ನು ಪಾಲಿಸುವವನಾಗಿದ್ದನು. ಗುಜರಾತ್‌ನ ಮತ್ತೊಬ್ಬ ನಾಯಕ ಬಹದ್ದೂರ್ ಷಾ. ಆತನು ಮಾಳ್ವ ಮತ್ತು ರಜಪುತಾನದ ಕೆಲವು ಭಾಗ ಗಳನ್ನು ಜಯಿಸಿ ಸಾಮ್ರಾಜ್ಯವನ್ನು ವಿಶಾಲಗೊಳಿಸಿದ್ದನು. ಹುಮಾಯೂನ್‌ನೊಂದಿಗೂ ಆತನು ಯುದ್ಧ ಮಾಡಿದ್ದನು. 1572ರಲ್ಲಿ ಅಕ್ಬರನು ಗುಜರಾತನ್ನು ಜಯಿಸಿ ದೆಹಲಿ ಸಾಮ್ರಾಜ್ಯಕ್ಕೆ ವಿಲೀನಗೊಳಿಸಿದನು.

**ಬಂಗಾಳ:** ಬಂಗಾಳವು ದೆಹಲಿ ಸಾಮ್ರಾಜ್ಯದ ಭಾಗವೆನಿಸಿದ್ದರೂ ದೆಹಲಿಗೆ ಬಲು ದೂರವಿರುವುದರಿಂದ ಸಂಪೂರ್ಣವಾಗಿ ದೆಹಲಿ ಆಡಳಿತದ ಅಧೀನದಲ್ಲಿರಲಿಲ್ಲ. ಕೇಂದ್ರದಲ್ಲಿ ಸಣ್ಣ ಬದಲಾವಣೆಗಳುಂಟಾದಾಗ ಅದು ತನ್ನನ್ನು ಸ್ವತಂತ್ರವೆಂದು

ಕರೆಸಿಕೊಳ್ಳುತ್ತಿತ್ತು. ಮುಹಮ್ಮದ್ ತುಗಲಕನ ಆಡಳಿತದ ಕೊನೆಯಲ್ಲೇ ಬಂಗಾಳದ ಮುಖಂಡನು ಬಂಡಾಯವೆದ್ದಿದ್ದನು. ಫೈರೋಝ್ ತುಗಲಕನು ಆತನನ್ನು ನಿಯಂತ್ರಣ ದಲ್ಲಿಡಲು ಎರಡು ಬಾರಿ ದಾಳಿ ನಡೆಸಿದ್ದನು. ಆದರೆ 1354ರಲ್ಲಿ ಇಲ್ಯಾಸ್ ಖ್ವಾಜಾ ಶಂಸುದ್ದೀನನ ಸ್ವಾತಂತ್ರ್ಯವನ್ನು ಒಪ್ಪಿಕೊಂಡನು. ಮೊದಲು ಪಂಡು, ನಂತರ ಗೋಡ್ ಆತನ ರಾಜಧಾನಿಯಾಗಿತ್ತು. ಇಲ್ಲಿನ ಆಡಳಿತಗಾರರಲ್ಲಿ ಹುಸ್ಸೈನ್‌ಷಾ ಮತ್ತು ನುಸ್ರತ್‌ಷಾರು ಖ್ಯಾತರಾಗಿದ್ದಾರೆ. ಅವರು ತಮ್ಮ ಪ್ರಜೆಗಳ ಕ್ಷೇಮದ ಬಗ್ಗೆ ಚಿಂತಿಸುತ್ತಿದ್ದರು. ಜನಕಲ್ಯಾಣದ ಅನೇಕ ಕೆಲಸಗಳನ್ನು ಮಾಡುತ್ತಿದ್ದರು. ಮಸೀದಿ ಮತ್ತು ಆಸ್ಪತ್ರೆ ಗಳನ್ನು ಕಟ್ಟಿಸಿದರು. ಬಂಗಾಳಿ ಭಾಷೆ ಮತ್ತು ಸಾಹಿತ್ಯವನ್ನು ಅಭಿವೃದ್ಧಿ ಪಡಿಸಿದರು. 1576ರಲ್ಲಿ ಅಕ್ಬರನು ಬಂಗಾಳವನ್ನು ಜಯಿಸಿ ತನ್ನ ಸಾಮ್ರಾಜ್ಯಕ್ಕೆ ಸೇರಿಸಿದನು.

**ವಿಜಯನಗರ:** 1336ರಲ್ಲಿ ಹರಿಹರ ಮತ್ತು ಬುಕ್ಕ ಎಂಬಿಬ್ಬರು ಸೋದರರು ಈ ಸ್ವತಂತ್ರ ರಾಜ್ಯದ ಬುನಾದಿ ಹಾಕಿದರು ಮತ್ತು ವಿಜಯನಗರವನ್ನು ತಮ್ಮ ರಾಜಧಾನಿಯನ್ನಾಗಿಸಿದರು. ಇದು ಮೆಲ್ಲಮೆಲ್ಲನೆ ದಕ್ಷಿಣ ಭಾರತದ ದೊಡ್ಡ ಮತ್ತು ಸುಂದರ ನಗರವಾಗಿ ಹೆಸರುವಾಸಿಯಾಯಿತು. ಇಲ್ಲಿನ ರಾಜರೊಂದಿಗೆ ಬಹಮನಿ ಸುಲ್ತಾನರು ಸಂಘರ್ಷಿಸುತ್ತಾ ಇದ್ದರು. 1565ರಲ್ಲಿ ಐವರು ಸುಲ್ತಾನರು ಜೊತೆಗೂಡಿ ಈ ನಗರದ ಮೇಲೆ ದಾಳಿ ಮಾಡಿ ನಗರವನ್ನು ಧ್ವಂಸಗೈದರು. ಕೊನೆಯಲ್ಲಿ ಪ್ರಖ್ಯಾತ ಮೊಗಲ್ ಸರದಾರ ಔರಂಗಝೇಬನು ಇವರೆಲ್ಲರನ್ನೂ ಸೋಲಿಸಿ ವಿಜಯನಗರವನ್ನು ತನ್ನ ಸಾಮ್ರಾಜ್ಯಕ್ಕೆ ಸೇರಿಸಿಕೊಂಡನು.

## ಪ್ರಶ್ನೆಗಳು

1. ಭಾರತವನ್ನು ಒಂದು ಕೇಂದ್ರ ಆಡಳಿತ ವ್ಯವಸ್ಥೆಯ ಕೆಳಗೆ ತರಲು ಏಕೆ ಕಷ್ಟಕರ ವಾಗಿತ್ತು?
2. ಮುಸ್ಲಿಮ್ ರಾಜರು ಇಡೀ ದೇಶವನ್ನು ದೆಹಲಿ ಸಾಮ್ರಾಜ್ಯಕ್ಕೆ ವಿಧೇಯಗೊಳಿಸಲು ಯಾವ ತಂತ್ರಗಳನ್ನು ಹೂಡುತ್ತಿದ್ದರು?
3. ದೂರ ದೂರದ ಪ್ರದೇಶಗಳು ಏಕೆ ಸುಲಭದಲ್ಲಿ ಸ್ವತಂತ್ರಗೊಳ್ಳುತ್ತಿತ್ತು?
4. ತೈಮೂರನ ಆಕ್ರಮಣದ ನಂತರ ದೇಶದಲ್ಲಿ ಯಾವ ಯಾವ ಸ್ವತಂತ್ರ ಆಡಳಿತ ಸ್ಥಾಪನೆಗೊಂಡಿತು?
5. ಬಹಮನಿ ಸಾಮ್ರಾಜ್ಯದ ಕುರಿತು ನೀವು ಏನು ತಿಳಿದು ಕೊಂಡಿದ್ದೀರಿ?
6. ಮುಹಮ್ಮದ್ ಗವಾನ್ ಯಾರು? ಆತನ ಜೀವನ ಮತ್ತು ಸಾಧನೆಯ ಮೇಲೆ ಬೆಳಕು ಚೆಲ್ಲಿ.
7. ಜೋನ್‌ಪುರದ ಶರ್ಕಿ ಆಡಳಿತವು ಹೇಗೆ ಅಧಿಕಾರಕ್ಕೆ ಬಂತು? ಅವರೇಕೆ ಪ್ರಖ್ಯಾತ ರಾದರು ಮತ್ತು ಅವರ ಸಾಮ್ರಾಜ್ಯದ ಕೊನೆ ಹೇಗಾಯಿತು?
8. ಮಾಳ್ವದ ಆಡಳಿತದ ಕುರಿತು ನೀವೇನು ತಿಳಿದಿದ್ದೀರಿ?

9. ಗುಜರಾತ್ ಪ್ರಾಂತ್ಯವು ಯಾವಾಗ ಸ್ವತಂತ್ರಗೊಂಡಿತು? ಅಲ್ಲಿ ಯಾವ ಯಾವ ಪ್ರಸಿದ್ಧ ಸರದಾರರಿದ್ದರು? ಅವರನ್ನು ಪರಿಚಯಿಸಿರಿ?
10. ಬಂಗಾಳದ ಸ್ವತಂತ್ರ ಸಾಮ್ರಾಜ್ಯದ ಕುರಿತು ನೀವೇನು ತಿಳಿದಿದ್ದೀರಿ? ಅದರ ಅಭಿವೃದ್ಧಿಗಾಗಿ ಯಾವ್ಯಾವ ಆಡಳಿತಗಾರರು ಪ್ರಯತ್ನಿಸಿದ್ದರು?
11. ವಿಜಯನಗರ ಸಾಮ್ರಾಜ್ಯವು ಹೇಗೆ ಸ್ಥಾಪನೆಗೊಂಡಿತು? ಅದರ ಅಂತ್ಯ ಹೇಗಾಯಿತು?
12. ಈ ಕೆಳಗಿನ ಇಸವಿಗಳು ಏಕೆ ಪ್ರಸಿದ್ಧವಾಗಿವೆ?
    1336, 1347, 1354, 1360, 1398, 1401, 1476, 1524.
13. ಭಾರತದ ನಕ್ಷೆ ಬಿಡಿಸಿ ಸ್ವತಂತ್ರ ಪ್ರಾಂತ್ಯಗಳ ಮೇರೆಗಳನ್ನು ಗುರುತಿಸಿರಿ.

# ಅಧ್ಯಾಯ - 7

## ಸಯ್ಯದ್ ಮುಹಮ್ಮದ್ ಜೋನ್‌ಪುರಿ ಮತ್ತು ಮೆಹ್ದವಿ ಆಂದೋಲನ

15ನೆಯ ಶತಮಾನದ ಆರಂಭದಲ್ಲಿ ಭಾರತದ ಪರಿಸ್ಥಿತಿ ಶೋಚನೀಯ ವಾಗಿತ್ತು. ತುಗಲಕ್ ಕುಟುಂಬದ ಉತ್ತರಾಧಿಕಾರಿಗಳ ಅದಕ್ಷತೆ, ಅವರ ಅಧಿಕಾರಿಗಳ ಮತ್ತು ಸೈನಿಕರ ದ್ರೋಹದಿಂದಾಗಿ ದೆಹಲಿ ಸಾಮ್ರಾಜ್ಯದ ಪ್ರತಿಷ್ಠೆ ಕಳೆಗುಂದಿತ್ತು. ತೈಮೂರನ ಆಕ್ರಮಣವು ಅಳಿದುಳಿದ ಪ್ರತಿಷ್ಠೆಯನ್ನೂ ಅಳಿಸಿಹಾಕಿತ್ತು. ದೇಶದ ಎಲ್ಲೆಡೆ ಅಕ್ರಮ, ಅತ್ಯಾಚಾರಗಳು ವ್ಯಾಪಕವಾಗಿದ್ದುವು. ನಾಯಕರುಗಳು ಸತ್ಯದ ವಾಹಕರಾಗುವ ಬದಲು ಮಿಥ್ಯದ ಪ್ರಚಾರಕರಾದರು. ಸ್ವಂತ ಲಾಭಕ್ಕಾಗಿ ಸಮಾಜವನ್ನು ಬಲಿಕೊಡಲು ಮುಂದಾಗಿದ್ದರು.

### ವಿದ್ವಾಂಸರು ಮತ್ತು ನಾಯಕರ ಅವಸ್ಥೆ

ವಿದ್ವಾಂಸರು ಮತ್ತು ನಾಯಕರು ತಮ್ಮ ಕರ್ತವ್ಯಗಳನ್ನು ನಿರ್ವಹಿಸಿದ್ದರೆ ಮತ್ತು ಸುಧಾರಣೆಯ ಕುರಿತು ಚಿಂತಿಸುತ್ತಿದ್ದರೆ ಕೆಡುಕು ಇಷ್ಟು ವ್ಯಾಪಕವಾಗುತ್ತಿರಲಿಲ್ಲ ಎಂಬುದು ನಿಸ್ಸಂಶಯ. ಏಕೆಂದರೆ ಅವರು ದೇಶದ ಮೂಲೆ ಮೂಲೆಯಲ್ಲೂ ವ್ಯಾಪಿಸಿ ದ್ದರು ಮತ್ತು ಸಮಾಜದಲ್ಲಿ ತುಂಬಾ ಪ್ರಭಾವ ಬೀರುವವರಾಗಿದ್ದರು. ಆದರೆ ಅವರು ರಾಜಕೀಯ ನೇತಾರರಿಗಿಂತಲೂ ನೀಚರಾಗಿದ್ದರು. ಅವರು ತತ್ವಶಾಸ್ತ್ರ ಮತ್ತು ಕರ್ಮ ಶಾಸ್ತ್ರದ ಆಂಶಿಕ ಸಮಸ್ಯೆಗಳಲ್ಲಿ ಮುಳುಗಿದ್ದರು. ಅನಗತ್ಯ ಚರ್ಚೆ, ಸಂವಾದಗಳಲ್ಲಿ ತಮ್ಮ ಅಮೂಲ್ಯ ಸಮಯವನ್ನು ವ್ಯರ್ಥಗೊಳಿಸುತ್ತಿದ್ದರು. ಧರ್ಮದ ಮೂಲವಾದ ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯನ್ನು ದೂರ ಮಾಡಿದ್ದರು. ಜೀವನದ ಮೂಲ ಸಮಸ್ಯೆಗಳನ್ನು ಬಗೆಹರಿಸುವ ಚಿಂತೆ ಅವರಿಗಿರಲಿಲ್ಲ. ಅಲ್ಲಾಹನ ಗ್ರಂಥ ಮತ್ತು ಪ್ರವಾದಿ

ವಚನಗಳು ಅವರ ದೃಷ್ಟಿಯಲ್ಲಿ ಮಾರ್ಗದರ್ಶನವಾಗಿರಲಿಲ್ಲ. ಇನ್ನು ಸೂಫಿ ಸಂತರು ಸನ್ಯಾಸಿಗಳಂತಾಗಿದ್ದರು. ಭೂಮಿಯಲ್ಲಿ ಅಲ್ಲಾಹನ ಪ್ರತಿನಿಧಿಗಳೆಂಬ ನೆಲೆಯಲ್ಲಿ ತಮ್ಮ ಕರ್ತವ್ಯ ನಿರ್ವಹಿಸಬೇಕಿದ್ದ ಅವರು, ಜನರಿಂದ ದೂರವಿದ್ದು ಕಾಡುಮೇಡುಗಳ ದಾರಿ ಹಿಡಿದಿದ್ದರು. ತಮ್ಮ ಅಮೂಲ್ಯ ಸಮಯವನ್ನು ತಪಶ್ಚರ್ಯೆ ಮತ್ತು ವ್ಯರ್ಥ ಪೀಡನೆಗಳಲ್ಲಿ ಕಳೆಯುತ್ತಿದ್ದರು. ವರ್ಷಗಟ್ಟಲೆ ಕಾಡುಗಳಲ್ಲಿ ನಿಂತು ಕೊಂಡು ಕಳೆಯುವುದು, ರಾತ್ರಿ ಜಾಗರಣೆ, ಹಗಲಲ್ಲಿ ಉಪವಾಸ, ಕಾಡಿನ ಹಣ್ಣು ಹಂಪಲುಗಳಿಂದ ಜೀವನ, ಬಾವಿಯಲ್ಲಿ ತಲೆ ಕೆಳಗೆ ಮಾಡಿ ಆರಾಧನೆ ಇತ್ಯಾದಿ ಅವರ ಮಾಮೂಲಾಗಿತ್ತು. ತಮ್ಮ ಆಯುಷ್ಯವನ್ನು ಕಾಡಿನಲ್ಲೇ ವ್ಯರ್ಥಗೊಳಿಸುತ್ತಿದ್ದರು. ಧಾರ್ಮಿಕ ಆಚರಣೆಗಳಿಂದ ವಿಮುಖತೆ ಮತ್ತು ಅದರ ಅಪಹಾಸ್ಯ ಮಾಡುತ್ತಿದ್ದರು. ದಾಸ ಮತ್ತು ದೇವ ಹಾಗೂ ಇಸ್ಲಾಮ್ ಮತ್ತು ಸತ್ಯನಿಷೇಧವನ್ನು ಒಂದೇ ಎಂದು ಅವರಲ್ಲಿ ಹೆಚ್ಚಿನವರು ಪರಿಗಣಿಸುತ್ತಿದ್ದರು.

## ಜನಸಾಮಾನ್ಯರ ಅವಸ್ಥೆ

ಇಂತಹ ಪರಿಸ್ಥಿತಿಯಲ್ಲಿ ಜನಸಾಮಾನ್ಯರ ಅವಸ್ಥೆ ಏನಾಗಿರಬಹುದೆಂದು ಸುಲಭದಲ್ಲಿ ಊಹಿಸಬಹುದು. ಅವರಿಗೆ ಧರ್ಮದೊಂದಿಗೆ ಸಾಂಪ್ರದಾಯಿಕ ಸಂಬಂಧವಿತ್ತಾದರೂ ಧರ್ಮದ ಸರಿಯಾದ ಜ್ಞಾನವಿರಲಿಲ್ಲ. ಬಹುದೇವ ವಿಶ್ವಾಸ ಮತ್ತು ಸತ್ಯವಿಶ್ವಾಸವು ಊಹೆ ಮತ್ತು ಗುಮಾನಿಯಲ್ಲಿ ಅಧಿಷ್ಠಿತವಾಗಿತ್ತು. ಪ್ರವಾದಿಚರ್ಯೆಗೆ ವಿರುದ್ಧವಾಗಿ ನವೀನಾಚಾರಗಳು ವ್ಯಾಪಕವಾಗಿದ್ದುವು. ಸಮಾಜದಲ್ಲಿ ಒಳಿತನ್ನು ಸಂಸ್ಥಾಪಿಸಬೇಕಾದವರು ತಮ್ಮ ಕರ್ತವ್ಯವನ್ನು ಮರೆತು, ಸ್ವತಃ ಕೆಡುಕಿನ ವಾಹಕರಾಗಿದ್ದರೆ ಸಮಾಜವು ಎಷ್ಟು ಕೆಟ್ಟರೂ ಅಚ್ಚರಿಯೇನಿಲ್ಲ. ವೈಯಕ್ತಿಕವಾಗಿ ಉತ್ತಮ ಗುಣಗಳನ್ನು ಮೈಗೂಡಿಸಿ ಕೊಂಡವರೂ ಸಮಾಜದಲ್ಲಿದ್ದರು. ಆದರೆ ಅವರು ಸಂಘಟಿತರಾಗಿ ಹೋರಾಡಿ ಒಳಿತನ್ನು ಸಂಸ್ಥಾಪಿಸಲು ಪ್ರಯತ್ನಿಸದಿರುವುದು ಅವರ ದೊಡ್ಡ ಕೊರತೆಯಾಗಿತ್ತು.

## ಮೆಹ್ದವಿ ಆಂದೋಲನ

ಇದೇ ಸಂದರ್ಭದಲ್ಲಿ ಒಂದು ಆಂದೋಲನ ಹುಟ್ಟಿತು. ಸಮಾಜವನ್ನು ಬಿಗಡಾಯಿಸಿದ್ದ ಎಲ್ಲರನ್ನೂ ಅದು ಎಚ್ಚರಿಸಿತು. ವಿದ್ವಾಂಸರ ಮತ್ತು ನಾಯಕರ ಕರ್ಮಭ್ರಷ್ಟತೆಯನ್ನು ಎತ್ತಿ ತೋರಿಸಿ ಅವರಿಗೆ ತಮ್ಮ ಜವಾಬ್ದಾರಿಯನ್ನು ಮನವರಿಕೆ ಮಾಡಿಸಿತು. ಜನರನ್ನು ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯೆಡೆಗೆ ಕರೆಯಿತು. ನವೀನಾಚಾರ ಮತ್ತು ಕಂದಾಚಾರಗಳಿಂದ ಜನರನ್ನು ಎಚ್ಚರಿಸಿತು. ಕೆಡುಕನ್ನು ದೂರೀಕರಿಸಿ ಒಳಿತನ್ನು ಆಜ್ಞಾಪಿಸುತ್ತಿತ್ತು. ಈ ಆಂದೋಲನದ ವಾಹಕರ ಪರಿಶುದ್ಧ ಜೀವನ, ಪರಿಶ್ರಮ ಮತ್ತು ಈ ಮಾರ್ಗದಲ್ಲಿನ ತ್ಯಾಗವು ಅವರ ನಿಷ್ಕಳಂಕತೆಗೆ ಸ್ಪಷ್ಟ ಸಾಕ್ಷಿಯಾಗಿತ್ತು. ಆದರೆ ಈ ಆಂದೋಲನ ಪ್ರಗತಿ ಸಾಧಿಸುತ್ತಲೇ ಇದರ ಸ್ಥಾಪಕನು ತನ್ನನ್ನು 'ಮೆಹ್ದಿ' ಎಂದು ವಾದಿಸತೊಡಗಿದನು. ಕೆಲವು ಅನುಯಾಯಿಗಳು

ಅದರಲ್ಲಿ ವಿಶ್ವಾಸವಿರಿಸಿದರು ಮತ್ತೆ ಕೆಲವರು ನಿರಾಕರಿಸಿ ಬಂಡಾಯವೆದ್ದರು. ಹೀಗೆ ಆತನಿಂದಾಗಿ ಆಂದೋಲನವು ಕುಂಟುತ್ತಾ ಸಾಗಿತು. ಸಮಾಜದಲ್ಲಿ ಆಂದೋಲನದ ಪ್ರಭಾವವು ಕಡಿಮೆಯಾಗುತ್ತಾ ಸಾಗಿತು. ತಮ್ಮನ್ನು ತಾವೇ ಸುಧಾರಿಸಲು ತಯಾರಿಲ್ಲದ ವಿದ್ವಾಂಸರು ಮತ್ತು ಸೂಫಿವರ್ಯರಿಗೆ, ಜನರನ್ನು ಮತ್ತು ನಾಯಕರನ್ನು ಈ ಆಂದೋಲನದಿಂದ ದೂರಗೊಳಿಸಿ ಅವರ ಇತರ ಉತ್ತಮ ಶ್ರಮಗಳಿಗೂ ನೀರೆರಚಲು ಅವಕಾಶ ದೊರೆಯಿತು.

## ಸಯ್ಯದ್ ಮುಹಮ್ಮದ್ ಜೋನ್‌ಪುರಿ

ಈ ಆಂದೋಲನದ ನೈಜ ಪ್ರೇರಕ ಶಕ್ತಿ ಸಯ್ಯದ್ ಮುಹಮ್ಮದ್ ಆಗಿದ್ದರು. ಅವರು 1423ರಲ್ಲಿ ಜೋನ್‌ಪುರದಲ್ಲಿ ಜನಿಸಿದರು. ಚಿಕ್ಕಂದಿನಲ್ಲೇ ಧಾರ್ಮಿಕ ಜ್ಞಾನವನ್ನು ಕರಗತ ಮಾಡಿಕೊಂಡಿದ್ದರು. ಮೆಲ್ಲಮೆಲ್ಲನೆ ಅವರ ಸಮಕಾಲೀನ ವಿದ್ವಾಂಸರಲ್ಲಿ ವಿಶೇಷ ಸ್ಥಾನ ಗಿಟ್ಟಿಸಿಕೊಂಡರು. ಜನಸಾಮಾನ್ಯರಿಗೆ ಸುಪರಿಚಿತರಾಗಿದ್ದರು. ಯುವಕನಿರುವಾಗಲೇ ಅವರಿಗೆ 'ಅಸದುಲ್ ಉಲೆಮಾ' ಎಂಬ ಬಿರುದು ಲಭಿಸಿತ್ತು. ದೇವಭಯ, ಪರಿಶುದ್ಧತೆ, ಆರಾಧನೆ, ಜಪತಪಗಳಲ್ಲಿ ಅವರನ್ನು ಮೀರಿಸುವವರಾರೂ ಇರಲಿಲ್ಲ. ನಾಯಕರು ಮತ್ತು ಸೂಫೀ ವರ್ಯರಲ್ಲಿ ಅವರು 'ಸಯ್ಯದುಲ್ ಔಲಿಯಾ' ಎಂಬ ಬಿರುದಿನಿಂದ ಪ್ರಖ್ಯಾತರಾಗಿದ್ದರು. ಅವರು ಆಕರ್ಷಕ ವ್ಯಕ್ತಿತ್ವವುಳ್ಳವರಾಗಿದ್ದರು. ಅವರ ಸಂಗ ಮಾಡಿದವರೆಲ್ಲರೂ ಅವರ ಆತ್ಮೀಯರಾಗುತ್ತಿದ್ದರು. ಅವರ ಮಾತಿನಲ್ಲಿ ಬಹಳ ಆಕರ್ಷಣೆಯಿತ್ತು. ಅಲ್ಲಾಹನು ಅವರಿಗೆ ವಾಕ್ಚಾತುರ್ಯದ ಸಾಮರ್ಥ್ಯವನ್ನು ದಯಪಾಲಿಸಿದ್ದನು. ಅವರ ಭಾಷಣಗಳು ಜನರಲ್ಲಿ ಭಾರೀ ಪ್ರಭಾವ ಬೀರುತ್ತಿತ್ತು. ಕಲ್ಲು ಹೃದಯಗಳನ್ನೂ ಅವರು ಮೃದುವಾಗಿಸುತ್ತಿದ್ದರು. ಮೆಲ್ಲಮೆಲ್ಲನೆ ಅವರ ಸಂಗಾತಿಗಳ ಮತ್ತು ಅನುಚರರ ಸಂಖ್ಯೆ ವೃದ್ಧಿಸುತ್ತಾ ಸಾಗಿತು. ಬಿಹಾರದ ದಾನಾಪುರದ ಸರದಾರನಾದ ಹುಸೈನನು ಅವರ ಅನುಯಾಯಿಯಾಗಿದ್ದನು. ಆದರೆ ಹುಸೈನ್ ಸರದಾರನು ತನ್ನ ಆಳ್ವಿಕೆಯಲ್ಲಿ ದುರ್ಬಲನಾದಾಗ ರಾಜನಾದ ದಿಲೀಪ್‌ರಾಯನು ಅವರನ್ನು ತನ್ನ ಅಧೀನಕ್ಕೆ ತಂದನು. ಇದನ್ನು ಸಹಿಸಲಾಗದೆ ಒಂದು ದಿನ ಸಯ್ಯದ್ ಜೋನ್‌ಪುರಿಯು ತುಂಬಿದ ದರಬಾರಿನಲ್ಲಿ ಆತನನ್ನುದ್ದೇಶಿಸಿ ಹೀಗೆಂದರು, "ಇಂದು ಭೂಲೋಕದಲ್ಲಿ ನಿನ್ನಷ್ಟು ವಂಚಿತನಾದವನು ಬೇರಾರೂ ಇರಲಿಕ್ಕಿಲ್ಲ ಮತ್ತು ಪುನರುತ್ಥಾನ ದಿನ ನೀನು ನರಕಕ್ಕೆ ಹೋಗುವವರ ಸಾಲಿನಲ್ಲಿರುವುದಾಗಿ ನಾನು ಭಯಪಡುತ್ತೇನೆ. ನೀನು ಇಸ್ಲಾಮನ್ನು ನಿಂದಿಸುತ್ತಿದ್ದಿ ಮತ್ತು ವಿಗ್ರಹಾರಾಧನೆಯನ್ನು ಪ್ರಚಾರ ಮಾಡುತ್ತಿದ್ದಿ." ಈ ಅವಮಾನಕಾರಿ ಮಾತನ್ನು ಕೇಳಿದ ದಿಲೀಪ್‌ರಾಯನು ಹುಸೈನ್ ಸರದಾರರೊಂದಿಗೆ ಘರ್ಷಣೆಗಿಳಿದನು. ಸಯ್ಯದ್ ಜೋನ್‌ಪುರಿಯು ಸೈನ್ಯ ಸಹಾಯಕ್ಕಾಗಿ ದರಬಾರಿನ ಎಲ್ಲರನ್ನು ಕೇಳಿಕೊಂಡನು. ಅವರೆಲ್ಲರೂ ಹುಸೈನನಿಗೆ ಬೆಂಬಲ ಸೂಚಿಸಿದರು. ದಿಲೀಪ್‌ರಾಯನ ಬಲಿಷ್ಠ ಸೈನ್ಯದೊಂದಿಗೆ ಹುಸೈನನು

ಯುದ್ಧಕ್ಕಿಳಿದನು. ಯುದ್ಧದಲ್ಲಿ ಹುಸೈನನು ಸೋಲಿನ ಭೀತಿಯಲ್ಲಿದ್ದನು. ಆದರೆ ಅವನು ಮತ್ತು ಅವನ ಬೆಂಬಲಿಗರು ತಮ್ಮ ಪ್ರಾಣ ತ್ಯಾಗಕ್ಕೂ ಸನ್ನದ್ಧರಾಗಿದ್ದರಿಂದ ಜಯವು ಹುಸೈನನ ಪಾಲಿಗಾಯಿತು. ಹುಸೈನನು ರಾಜ ದಿಲೀಪ್‌ರಾಯನನ್ನು ಕೊಲೆಗೈದನು.

ಈ ಯುದ್ಧದ ಬಳಿಕ ಅವರು ಭಾವುಕ ವ್ಯಕ್ತಿಯಾದರು. ಇದೇ ಸ್ಥಿತಿಯಲ್ಲಿ ಅವರು ಹನ್ನೊಂದು ವರುಷ ಕಳೆದರು. ಜನರಿಂದ ದೂರವಿದ್ದು ನಿರಂತರ ಉಪವಾಸ ಆಚರಿಸುತ್ತಾ ದೇವಸ್ಮರಣೆಯಲ್ಲಿಯೇ ಮುಳುಗಿದ್ದರು. ಈ ಅವಧಿಯಲ್ಲಿ ಕೆಲವೊಮ್ಮೆ ತಾನು 'ಮೆಹ್ದಿ' ಎಂದು ಪುನರುಚ್ಚರಿಸುತ್ತಿದ್ದರು. ಇದರಿಂದಾಗಿ ಜನರು ಆಂದೋಲನ ದಿಂದ ದೂರವಾಗ ತೊಡಗಿದರು. ವಿರೋಧಿಗಳಿಗೆ ಅವರನ್ನು ಆಕ್ಷೇಪಿಸಲು ಒಂದು ನೆಪ ಸಿಕ್ಕಿತು. ಹೀಗೆ ಅವರು ಜನಸಾಮಾನ್ಯರಲ್ಲಿ ಈ ವಿಷಯದಲ್ಲಿ ಗೊಂದಲ ಸೃಷ್ಟಿಸಿದರು.

ಕೆಲವು ವರ್ಷಗಳ ಬಳಿಕ ಅವರು ದೇಶ ಬಿಟ್ಟು ಪ್ರವಾಸ ಕೈಗೊಳ್ಳಲು ನಿರ್ಧರಿಸಿ ವಿದ್ವಾಂಸರು ಮತ್ತು ನಾಯಕರು ನೆಲೆಸಿರುವ ಎಲ್ಲ ಸ್ಥಳಗಳನ್ನು ಗುರುತಿಸಿದರು. ಚಂದ್ರಗಿರಿ, ಮಾಂಡು, ಜಾಪಾನ್ಪೈರ್, ದೌಲತಾಬಾದ್, ಅಹ್ಮದ್‌ನಗರ, ಬೀದರ್, ಗುಲ್ಬರ್ಗದಂತಹ ದೂರ ಪ್ರದೇಶಗಳಿಗೆ ಹೋಗಿ ಅಲ್ಲಿನ ವಿದ್ವಾಂಸರು, ನಾಯಕರು ಮತ್ತು ಸರದಾರರ ಸುಧಾರಣೆಗೆ ಪ್ರಯತ್ನಿಸಿದರು. ಅವರ ಕುಂದು-ಕೊರತೆಗಳನ್ನು ತೋರಿಸಿದರು. ವೈಚಾರಿಕ ಮತ್ತು ಪ್ರಾಯೋಗಿಕ ನ್ಯೂನತೆಗಳನ್ನು ಗುರುತಿಸಿದರು. ಕರ್ಮಶಾಸ್ತ್ರದ ಆಂಶಿಕ ಭಿನ್ನಾಭಿಪ್ರಾಯಗಳಲ್ಲಿನ ಕುತರ್ಕಗಳನ್ನು ತಡೆದರು. ಕುರ್‌ಆನ್ ಮತ್ತು ಪ್ರವಾದಿಚರ್ಯೆಯ ಅನುಸರಣೆಗೆ ಕರೆ ನೀಡಿದರು. ಲೋಕಾರಾಧನೆಯ ಪರಿಣಾಮವನ್ನು ಎಚ್ಚರಿಸಿ, ಅಲ್ಲಾಹನ ದಾಸ್ಯ ಆರಾಧನೆಯ ಕರೆಯಿತ್ತರು. ಧರ್ಮದ ಬೇಡಿಕೆಯನ್ನು ಮನವರಿಕೆ ಮಾಡಿಕೊಟ್ಟರು. ನವೀನಾಚಾರ ಮತ್ತು ದುಷ್ಕೃತ್ಯಗಳಿಂದ ದೂರವಿರುವಂತೆ ಉಪದೇಶ ನೀಡಿದರು. ಪರಲೋಕ ವಿಚಾರಣೆಯ ಭಯ ಹುಟ್ಟಿಸಿದರು. ಒಟ್ಟಿನಲ್ಲಿ ಆ ಧರ್ಮಯೋಧ ಪ್ರಾಮಾಣಿಕವಾಗಿ ತನ್ನ ಕರ್ತವ್ಯವನ್ನು ಈಡೇರಿಸಲು ಪ್ರಯತ್ನಿಸಿದರು. ಕೆಲವರು ಅವರ ಮಾತಿಗೆ ಬೆಲೆಕೊಟ್ಟರು. ಆದರೆ ಹೆಚ್ಚಿನವರು ಕೇಳಿಯೂ ಕೇಳದಂತೆ ಮಾಡಿದರು. ಸ್ವಾರ್ಥಿ ಗಳಾದ ವಿದ್ವಾಂಸರು ಮತ್ತು ನೇತಾರರು ಧರ್ಮನಿರಪೇಕ್ಷತೆ ಮತ್ತು ಸತ್ಯನಿಷೇಧದ ಆರೋಪ ಹೊರಿಸಿದರು ಮತ್ತು ತರತರವಾಗಿ ಆಕ್ಷೇಪಿಸ ತೊಡಗಿದರು. ಅವರು ಈ ರೀತಿ ಹೇಳುತ್ತಿದ್ದರು, "ನೀವು ಮುಸ್ಲಿಮರನ್ನು ಕಾಫಿರರೆಂದು ಕರೆದು ಅವರನ್ನು ಸತ್ಯವಿಶ್ವಾಸ ಸ್ವೀಕರಿಸಲು ಆಜ್ಞಾಪಿಸುತ್ತೀರಿ. ನೀವು ಮಹಾನರಾದ ಇಮಾಮರನ್ನು ಅನುಸರಿಸುವ ಬದಲು, ಎಲ್ಲ ಸಮಸ್ಯೆಗಳ ಪರಿಹಾರವನ್ನು ಕುರ್‌ಆನ್ ಮತ್ತು ಪ್ರವಾದಿ ಚರ್ಯೆಯಲ್ಲಿ ಹುಡುಕುತ್ತೀರಿ. ನೀವು ತರ್ಕಶಾಸ್ತ್ರದ ಕಲಿಕೆ ಮತ್ತು ಸಂವಾದವೇರ್ಪಡಿಸು ವುದನ್ನು ತಡೆಯುತ್ತೀರಿ. ನಿಮ್ಮ ಅನುಯಾಯಿಗಳು ವಿದ್ವಾಂಸರನ್ನು ಮತ್ತು ನೇತಾರರನ್ನು ಕೀಳಾಗಿ ಕಾಣಲಾರಂಭಿಸಿದ್ದಾರೆ ಮತ್ತು ಅವರ ಮೇಲೆ ಆರೋಪ ಹೊರಿಸುತ್ತಿದ್ದಾರೆ."

ಅವರು ಈ ಆರೋಪಗಳಿಗೆ ತಕ್ಕುದಾದ ಉತ್ತರ ನೀಡುತ್ತಿದ್ದರು. ಆದರೂ ಅವರ ವಿರೋಧಿಗಳು ತಮ್ಮ ಕೆಟ್ಟ ಚಾಳಿಯನ್ನು ಮುಂದುವರಿಸುತ್ತಿದ್ದರು ಮತ್ತು ಜನರನ್ನು ಅವರ ವಿರುದ್ಧ ಹುರಿದುಂಬಿಸುತ್ತಿದ್ದರು. ಪರಿಣಾಮವಾಗಿ ಅವರು ಹೋದಲ್ಲೆಲ್ಲಾ ವಿದ್ವಾಂಸರು ಮತ್ತು ನಾಯಕರು ಕಿರುಕುಳ ಕೊಡುತ್ತಿದ್ದರು.

ಈ ಪ್ರವಾಸದ ಬಳಿಕ, 1495ರಲ್ಲಿ ಅವರು ಹಜ್ಜ್ ಯಾತ್ರೆಗೆ ಹೊರಟರು. ಅಲ್ಲಿ ಅವರು ಪುನಃ ತನ್ನ 'ಮೆಹ್ದಿ' ವಾದವನ್ನು ಪ್ರತಿಪಾದಿಸಿದರು. ಹಜ್ಜ್ ಕರ್ಮ ಮುಗಿಸುತ್ತಲೇ ಅಹ್ಮದಾಬಾದ್(ಗುಜರಾತ್)ಗೆ ತಲುಪಿದರು. ಅಲ್ಲಿ ಅವರು ಒಂದು ಸಾರ್ವಜನಿಕ ಭಾಷಣದಲ್ಲಿ ತಮ್ಮ ಶರೀರದ ಚರ್ಮವನ್ನು ಎರಡು ಬೆರಳಿನಿಂದ ಎಳೆದು ಹಿಡಿದು ಹೀಗೆಂದರು, "ಯಾರು ನಾನು 'ಮೆಹ್ದಿ' ಎಂಬುದನ್ನು ನಿರಾಕರಿಸುತ್ತಾರೋ ಅವರು ಕಾಫಿರರು." ಈ ಮಾತು ಹೊರಡುವಾಗ ಅವರ ಹೃದಯ ಮತ್ತು ಬುದ್ಧಿ ಹೇಗಿತ್ತೆಂದು ತಿಳಿದಿಲ್ಲ. ಇದು ಭಾರೀ ಕ್ಷೋಭೆಗೆ ಕಾರಣವಾಯಿತು. ವಿದ್ವಾಂಸರು ಮತ್ತು ನಾಯಕರು ಅವರನ್ನು ಗಡಿಪಾರು ಮಾಡಲು ಆದೇಶ ನೀಡಿದರು. ಹೀಗೆ ಅವರು ಹೊರಡುವಾಗ ಹೀಗೆಂದರು, "ಪುನರುತ್ಥಾನ ದಿನ ವಿದ್ವಾಂಸರು ಮತ್ತು ನಾಯಕರಿಗೆ ಭಾರೀ ಅವಮಾನ ವಾಗುವುದು, ಏಕೆಂದರೆ ನಾನು ಸತ್ಯದಲ್ಲಿದ್ದರೆ ಅವರೇಕೆ ನನಗೆ ಸಹಕರಿಸಲಿಲ್ಲ. ಒಂದು ವೇಳೆ ನನ್ನದು ಅಸತ್ಯವಾಗಿದ್ದರೆ ಅವರೇಕೆ ನನ್ನನ್ನು ಬಂಧಿಸಿ ನನ್ನ ತಪ್ಪನ್ನು ನನಗೆ ಮನವರಿಕೆ ಮಾಡಲಿಲ್ಲ? ಒಂದು ವೇಳೆ ನನ್ನ ತಪ್ಪನ್ನು ನನಗೆ ಮನವರಿಕೆ ಮಾಡಿಯೂ ನಾನು ನನ್ನನ್ನೇ ಸಮರ್ಥಿಸಿದ್ದರೆ ಅವರೇಕೆ ನನ್ನನ್ನು ವಧಿಸಲಿಲ್ಲ? ಆದುದರಿಂದ ನಾನೆಲ್ಲಿ ಹೋದರೂ ಈ ಸಂದೇಶದ ಕಡೆಗೆ ಜನರನ್ನು ಕರೆಯುತ್ತೇನೆ ಮತ್ತು ಜನರು ಪಥಭ್ರಷ್ಟ ರಾಗುವುದಾದರೆ ಅದರ ಪಾಪ ನಿಮ್ಮ ಮೇಲಿರುವುದು."

## ಕಂದಹಾರ್ ಪಯಣ

ಸಯ್ಯದ್ ಮುಹಮ್ಮದ್ ಜೋನ್‌ಪುರಿಯು ತನ್ನ ಮುನ್ನೂರ ಎಪ್ಪತ್ತು ಅನುಚರ ರೊಂದಿಗೆ ಕಂದಹಾರ್‌ಗೆ ಹೋದರು. ಅಲ್ಲಿ ಅವರು ತಮ್ಮ ಸಂದೇಶವನ್ನು ಪ್ರಚಾರ ಮಾಡಿ ಸಮಾಜದಲ್ಲಿ ಪ್ರಭಾವ ಬೀರತೊಡಗಿದರು. ಇದು ಸ್ವಾರ್ಥಿಗಳಾದ ವಿದ್ವಾಂಸರು ಮತ್ತು ನಾಯಕರಿಗೆ ಸಹಿಸಲಾಗಲಿಲ್ಲ. ಅವರು ಉಗ್ರವಾಗಿ ವಿರೋಧಿಸುತ್ತಾ ತರತರದ ಆರೋಪ ಗಳನ್ನು ಹೊರಿಸತೊಡಗಿದರು. ಆದರೆ ಸಯ್ಯದ್ ಮುಹಮ್ಮದ್ ಮತ್ತು ಅವರ ಸಂಗಾತಿಗಳು ಸಹನೆ ಕೈಗೊಂಡರು. ಈ ವಿರೋಧವನ್ನು ಮತ್ತು ಭಿನ್ನಾಭಿಪ್ರಾಯಗಳನ್ನು ಕೊನೆಗೊಳಿಸುವ ನಿಟ್ಟಿನಲ್ಲಿ, ಅಲ್ಲಿನ ಇಪ್ಪತ್ತರ ಹರೆಯದ ಆಡಳಿತಗಾರ ಶುಕ್ರವಾರದಂದು ಸಯ್ಯದ್ ಮುಹಮ್ಮದರ ಭಾಷಣಕ್ಕೆ ಅವಕಾಶ ಕಲ್ಪಿಸಿಕೊಟ್ಟನು. ಊರಿನ ಎಲ್ಲ ವಿದ್ವಾಂಸರು ಈ ಸಭೆಯಲ್ಲಿ ಪಾಲ್ಗೊಂಡರು. ಅವರು ಪರಿಣಾಮಕಾರಿ ಶೈಲಿಯಲ್ಲಿ ಧರ್ಮದ ಬೇಡಿಕೆಯನ್ನು ಮನವರಿಕೆ ಮಾಡಿಕೊಟ್ಟರು. ಕುರ್‌ಆನ್ ಮತ್ತು ಪ್ರವಾದಿ ಜೀವನ ಸಂದೇಶವನ್ನು ಸಮರ್ಪಿಸಿದರು. ಅವರ ಭಾಷಣವು ಸಭಿಕರನ್ನು ಬಹಳಷ್ಟು ಆಕರ್ಷಿಸಿತು. ಅಧಿಕಾರಿಯೂ ಅವರ ಭಾಷಣದಿಂದ ಪ್ರಭಾವಿತನಾದನು. ಹೀಗೆ ವಿರೋಧಿಗಳಿಂದ ಅವರಿಗೆ ಮುಕ್ತಿ ಲಭಿಸಿತು.

## ಫರಾದಲ್ಲಿ ವಾಸ

ಸಯ್ಯದ್ ಮುಹಮ್ಮದ್ ಜೋನ್‌ಪುರಿಯು ಕಂದಹಾರ್ ತ್ಯಜಿಸಿ ಖುರಾಸಾನ್‌ಗೆ ತಲುಪಿದರು. ಅಲ್ಲಿನ ಫರಾ ಪಟ್ಟಣದಲ್ಲಿ ವಾಸತೊಡಗಿದರು. ಅಲ್ಲಿಯೂ ಅವರಿಗೆ ವಿರೋಧ ಆರಂಭವಾಯಿತು. ನಗರದ ಕಾಝಿ (ನ್ಯಾಯಾಧೀಶ) ತುಂಬಾ ಕಿರುಕುಳ ಕೊಟ್ಟನು. ಖುರಾಸಾನ್‌ನ ಸರದಾರನನ್ನು ಅವರ ವಿರುದ್ಧ ಎಬ್ಬಿಸಿದನು. ಸರದಾರನು ಅವರನ್ನು ಮತ್ತು ಅವರ ಅನುಯಾಯಿಗಳನ್ನು ಕೊನೆಗೊಳಿಸುವ ನಿಟ್ಟಿನಲ್ಲಿ ತನ್ನ ನಂಬಿಗಸ್ಥ ಮಂತ್ರಿಯನ್ನು ಸೈನ್ಯದೊಂದಿಗೆ ರವಾನಿಸಿದನು. ಸೈನ್ಯವು ದೂರದಲ್ಲಿರುವಾಗಲೇ ಸಯ್ಯದ್ ಮುಹಮ್ಮದರಿಗೆ ಮಂತ್ರಿಯು ಆಕ್ರಮಣಕ್ಕೆ ಸಜ್ಜಾದ ಸುದ್ದಿಸಿಕ್ಕಿತು. ಅವರು ಧೈರ್ಯದಿಂದ, "ಯಾವ ಸರದಾರ? ಎಂತಹ ಮಂತ್ರಿ? ಸರದಾರ ಕೇವಲ ಒಬ್ಬನೇ ಆಗಿದ್ದಾನೆ ಮತ್ತು ಆತನಿಗೆ ಮಂತ್ರಿಯಿರುವುದಿಲ್ಲ" ಎಂದರು.

ಸೈನ್ಯವು ತಲುಪಿದಾಗ ಸಯ್ಯದ್ ಮುಹಮ್ಮದ್ ಮತ್ತು ಅವರ ಸಹಚರರು ಪ್ರತಿಹೋರಾಟಕ್ಕೆ ಸಿದ್ಧರಾಗದೆ ಸಹನೆಯಿಂದಿದ್ದರು. ಮಂತ್ರಿಗೆ ಇವರ ಧೈರ್ಯವನ್ನು ಕಂಡು ಆಶ್ಚರ್ಯವಾಯಿತು. ಆಕ್ರಮಣಕ್ಕೆ ಬದಲಾಗಿ ಮಂತ್ರಿಯು ಮಾತುಕತೆಗಿಳಿದನು. ಮಾತಿನ ಮಧ್ಯೆ 'ಮೆಹ್ದವಿ' ಆಂದೋಲನದ ಬಗ್ಗೆ ಚರ್ಚೆಯಾಯಿತು. ಮಂತ್ರಿಯು ಹೀಗೆಂದನು, "ಒಂದು ವೇಳೆ ನೀವು ನಿಜವಾಗಿಯೂ ನಿಮ್ಮನ್ನು 'ಮೆಹ್ದಿ' (ಅಂದರೆ ಧರ್ಮದ ನವೋತ್ಥಾನ ಮತ್ತು ಸಮುದಾಯದ ಏಳಿಗೆಗಾಗಿ ಶ್ರಮಿಸುವವ) ಎಂದು ವಾದಿಸುವಿರಾದರೆ ಸರಿ, ನಾವೆಲ್ಲರೂ ನಿಮ್ಮ ಜೊತೆಗಿದ್ದೇವೆ. ಆದರೆ ನೀವು ನಿಮ್ಮನ್ನು ಕೊನೆಯ 'ಮೆಹ್ದಿ' ಎಂದು ವಾದಿಸುವುದಾದರೆ ಅದಕ್ಕೆ ಅಲ್ಲಾಹನ ನಿದರ್ಶನ ತೋರಿಸ ಬೇಕಾಗುವುದು" ಎಂದನು. ಅದಕ್ಕೆ ಸಯ್ಯದ್ ಮುಹಮ್ಮದರು ನಿದರ್ಶನಗಳನ್ನು ತೋರಿಸುವುದು ಅಲ್ಲಾಹನ ಕೆಲಸವಾಗಿದೆ ಮತ್ತು ನಮ್ಮ ಕೆಲಸ ಸತ್ಯಧರ್ಮದೆಡೆಗೆ ಕರೆಯುವುದು ಮತ್ತು ಪ್ರಚಾರ ಮಾಡುವುದಾಗಿದೆ ಎಂದರು.

## ನಿಧನ

ಇದಾದ ನಂತರ ಅವರನ್ನು ಅವರ ಪಾಡಿಗೆ ಬಿಟ್ಟು ಬಿಡಲಾಯಿತು. ಅವರು ತಮ್ಮ ಸಂದೇಶವನ್ನು ಜಾರಿಯಲ್ಲಿಟ್ಟಿದ್ದರು. 1504ರಲ್ಲಿ ನಿಧನ ಹೊಂದಿದರು. ನಿಧನಕ್ಕಿಂತ ಸ್ವಲ್ಪ ಮುಂಚೆ ತಮ್ಮ ಮೆಹ್ದವಿ ವಾದದಿಂದ ಹಿಂದೆ ಸರಿದಿದ್ದರೆಂದು ಪ್ರಚಾರವಾಗಿತ್ತು. ಕೆಲವು ಕಾಲದ ನಂತರ ಈ ವಿಷಯವನ್ನು ಒಬ್ಬ ಮೊಗಲ್ ಅನುಯಾಯಿಯು ಭಾರತಕ್ಕೆ ತಲುಪಿಸಿದ್ದನು. ಆತನು ಸಯ್ಯದ್ ಮುಹಮ್ಮದರ ಮರಣದ ವೇಳೆ ಜೊತೆಗಿದ್ದನು. ಇದರಿಂದಾಗಿ ಮೆಹ್ದವಿ ಆಂದೋಲನದಲ್ಲಿ ಇನ್ನೂ ಚಟುವಟಿಕೆ ನಿರತರಾಗಿದ್ದವರು ಪಶ್ಚಾತ್ತಾಪಪಟ್ಟರು. ಆ ಕಾಲದ ಖ್ಯಾತ ಇತಿಹಾಸಕಾರನಾಗಿದ್ದ ಮುಲ್ಲಾ ಅಬ್ದುಲ್ ಖಾದರ್ ಬದಾಯೂನೀ ಆ ಮೊಗಲನನ್ನು ಭೇಟಿಯಾಗಿದ್ದನು ಮತ್ತು ತನ್ನ ಇತಿಹಾಸ ಪುಸ್ತಕದಲ್ಲಿ ಈ ವಿಷಯಗಳನ್ನು ಉಲ್ಲೇಖಿಸಿದ್ದಾನೆ.

## ಸಯ್ಯದ್ ಜೋನ್‌ಪುರಿಯ ಸೇವೆಗಳು

'ಮೆಹ್ದಿ' ವಾದ ಮತ್ತು ವಿರೋಧಿಗಳ ಅಪಪ್ರಚಾರಗಳಿಂದ ಈ ಆಂದೋಲನದ ಜತೆಗೂಡುವವರ ಸಂಖ್ಯೆಯು ಕಡಿಮೆಯಿತ್ತಾದರೂ ಧರ್ಮದ ನವೋತ್ಥಾನ ಮತ್ತು ಸಮುದಾಯದ ಏಳಿಗೆಗಾಗಿ ಮಾಡಿದ ಪ್ರಯತ್ನವು ದೇಶದಲ್ಲಿ ಭಾರೀ ಜಾಗೃತಿಯುಂಟು ಮಾಡಿತು. ವಿರೋಧಿಗಳು ಮತ್ತು ಪಥಭ್ರಷ್ಟರು ತಮ್ಮಷ್ಟಕ್ಕೆ ಸುಧಾರಿಸತೊಡಗಿದರು. ಖಂಡಿತವಾಗಿಯೂ ಇದು ಸಯ್ಯದ್ ಮುಹಮ್ಮದರ ಪರಿಶ್ರಮದ ಫಲವಾಗಿದೆ. ಅವರ ನಂತರ ಭಾರತವು ಸಿಕಂದರ್ ಲೋದಿ ಮತ್ತು ಶೇರ್‌ಷಾನ ಉನ್ನತಿಯ ಕಾಲವನ್ನೂ ಕಂಡಿತು.

## ಅವರ ನಂತರ

ಅವರ ನಿಧನದ ನಂತರ ಅವರ ಆಂದೋಲನ ಮುಂದುವರಿಯಿತು. ಅಬ್ದುಲ್ಲಾ ಖಾನ್ ನಿಯಾಝಿ ಮತ್ತು ಶೈಖ್ ಅಲಾಯಿಯವರು ಈ ಆಂದೋಲನಕ್ಕೆ ಹೊಸ ಚೈತನ್ಯ ನೀಡಿದರು.

## ಅಬ್ದುಲ್ಲಾ ಖಾನ್ ನಿಯಾಝಿ

ಅಬ್ದುಲ್ಲಾ ಖಾನ್ ನಿಯಾಝಿಯವರು ಅಫಘಾನಿಸ್ಥಾನದವರಾಗಿದ್ದರು. ಶೇರ್‌ಷಾನ ಕಾಲದಲ್ಲಿ ಅವರು ಬಹಳ ಪ್ರಸಿದ್ಧಿ ಪಡೆದಿದ್ದರು. ಮೆಹ್ದವಿ ಆಂದೋಲನದಲ್ಲಿ ಆಕರ್ಷಿತರಾಗಿ ಮನೆಬಿಟ್ಟರು ಮತ್ತು ತನ್ನ ಸಂಪತ್ತನ್ನೆಲ್ಲ ಬಡವರಿಗೆ ಹಂಚಿದರು. ಐಶಾರಾಮ ಜೀವನ ತ್ಯಜಿಸಿ ಸರಳ ಜೀವನ ಸಾಗಿಸಲಾರಂಭಿಸಿದರು. ಅವರ ಪ್ರಯತ್ನ ದಿಂದಾಗಿ ಅನೇಕರ ಜೀವನ ಸುಧಾರಣೆಗೊಂಡಿತು ಮತ್ತು ಒಂದು ಉತ್ತಮ ಅನುಯಾಯಿಗಳ ತಂಡ ಅವರಿಗಾಯಿತು. ಆ ಮೂಲಕ ಅವರು ಸಂಘಟಿತವಾಗಿ ಒಳಿತನ್ನು ಸಂಸ್ಥಾಪಿಸಲು ಮತ್ತು ಕೆಡುಕನ್ನು ನಿರ್ಮೂಲನಗೊಳಿಸಲಿಕ್ಕಾಗಿ ಶ್ರಮಿಸುತ್ತಿದ್ದರು. ಅವರು ತಮ್ಮ ಅನುಚರರಲ್ಲಿ ಎಂತಹ ತರಬೇತಿ ಮತ್ತು ಆವೇಶ ತುಂಬಿದ್ದರೆಂದರೆ ಮುಸ್ಲಿಮ್ ಸಮಾಜದಲ್ಲಿ ಅವರು ಯಾವುದೇ ಅನಿಸ್ಲಾಮಿಕ ಚಟುವಟಿಕೆ ತಲೆಯೆತ್ತಲು ಬಿಡುತ್ತಿರಲಿಲ್ಲ. ಅಗತ್ಯ ಬಂದಾಗ ಕೆಡುಕನ್ನು ಬಲತ್ಕಾರದಿಂದ ತಡೆಯುತ್ತಿದ್ದರು.

## ಶೈಖ್ ಅಲಾಯಿ

ಅಬ್ದುಲ್ಲಾ ಖಾನ್ ನಿಯಾಝಿಯವರ ಪ್ರಯತ್ನದಿಂದಾಗಿ ಶೈಖ್ ಅಲಾಯಿಯವರು ಮೆಹ್ದವಿ ಆಂದೋಲನದ ಜತೆ ಸೇರಿದರು. ಶೈಖ್ ಅಲಾಯಿಯವರು ಬಂಗಾಳದ ಒಬ್ಬ ಅಧ್ಯಾಪಕರಾಗಿದ್ದರು. ಹಜ್ಜ್ ಯಾತ್ರೆ ನಿರ್ವಹಿಸಿ ಬರುವಾಗ ಬಯಾನಾದಲ್ಲಿ ನೆಲೆಸಿದರು. ಅಲ್ಲಿ ಅಬ್ದುಲ್ಲಾಖಾನ್ ನಿಯಾಝಿಯವರ ಪ್ರಾಮಾಣಿಕತೆ ಮತ್ತು ದೇವಭಯದಿಂದ ಪ್ರಭಾವಿತರಾದರು ಹಾಗೂ ಧರ್ಮದ ನವೋತ್ಥಾನ ಮತ್ತು ಸಮುದಾಯದ ಸುಧಾರಣೆ ಯಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಧರ್ಮಜ್ಞಾನ, ದೇವಭಯ ಮತ್ತು ಪರಿಶುದ್ಧತೆ ಯುಳ್ಳವರಾಗಿದ್ದರು. ಅವರಿಗೆ ಪರಿಣಾಮಕಾರಿ ಭಾಷಣ ಮಾಡುವ ಸಾಮರ್ಥ್ಯವಿತ್ತು. ಈ

ಮೂಲಕ ಆಂದೋಲನದ ಚಟುವಟಿಕೆಗಳು ಕ್ಷಿಪ್ರಗೊಂಡವು. ಆಂದೋಲನವು ಜನಸಾಮಾನ್ಯರಿಂದ ನಾಯಕರು ಮತ್ತು ಸರದಾರರನ್ನೂ ಆಕರ್ಷಿಸಿತು. ಶೈಖ್ ಅಲಾಯಿಯವರ ಪ್ರಯತ್ನದಿಂದಾಗಿ ಶೇರ್‌ಷಾನ ಪ್ರಖ್ಯಾತ ಸೇನಾಧಿಕಾರಿ ಹುಮಾಯೂನ್ ಮತ್ತು ಇತರ ಅನೇಕ ಅಧಿಕಾರಿಗಳು ಅವರ ಅನುಯಾಯಿಗಳಾದರು.

## ಅಬ್ದುಲ್ಲಾ ಖಾನ್ ನಿಯಾಝಿಯೊಂದಿಗಿನ ಕ್ರೋಧ

ಆಂದೋಲನದ ಹೆಚ್ಚುತ್ತಿರುವ ಪ್ರಭಾವವನ್ನು ಕಂಡು ಸ್ವಾರ್ಥಿಗಳಾದ ವಿದ್ವಾಂಸರು ಮತ್ತು ನಾಯಕರು ತಿರುಗಿಬಿದ್ದರು. ಸಲೀಮ್‌ಷಾ ಸೂರಿಯ ಆಡಳಿತ ಕಾಲದಲ್ಲಿ ದುಷ್ಟ ವಿದ್ವಾಂಸನಾಗಿದ್ದ ಮಕ್‌ದೂಮುಲ್ ಮಲಿಕ್ ಅಬ್ದುಲ್ಲಾ ಸುಲ್ತಾನ್‌ಪುರಿಗೆ ಆಸ್ಥಾನದಲ್ಲಿ ಭಾರೀ ಸ್ಥಾನಮಾನವಿತ್ತು. ಅವನು ಸಲೀಮ್ ಷಾನನ್ನು ಅಬ್ದುಲ್ಲಾಖಾನ್ ನಿಯಾಝಿಯ ವಿರುದ್ಧ ಎತ್ತಿಕಟ್ಟಿದನು. ಈ ನವೋತ್ಥಾನ ಮತ್ತು ಸುಧಾರಣಾ ಚಟುವಟಿಕೆಗಳು ಆಡಳಿತಕ್ಕೆ ಕುತ್ತು ತರುವಂತಹುದೆಂದು ಭಯಪಡಿಸಿದನು. ಅವರನ್ನು ನಿಯಂತ್ರಿಸದಿದ್ದರೆ ಆತನು ತನ್ನ ಅನುಯಾಯಿಗಳೊಂದಿಗೆ ಆಡಳಿತವನ್ನು ವಶಪಡಿಸುವನು ಎಂದನು. ಇದರಿಂದಾಗಿ ಸರದಾರನು ಅಬ್ದುಲ್ಲಾಖಾನ್ ನಿಯಾಝಿಯನ್ನು ದ್ವೇಷಿಸ ತೊಡಗಿದನು. ಸಲೀಮ್ ಷಾನು ಬಯಾನಾಕ್ಕೆ ಹೋಗಿದ್ದ ಸಂದರ್ಭದಲ್ಲಿ ಮಕ್‌ದೂಮ್ ಮಲಿಕ್ ಆತನ ಜೊತೆಗಿದ್ದನು. ಮಕ್‌ದೂಮ್ ಮಲಿಕನು ಹೀಗೆಂದನು, "ಅತ್ಯಂತ ದೊಡ್ಡ ಕ್ಷೋಭೆಯು ಇದೇ ಊರಿನಲ್ಲಿದೆ." ಅಬ್ದುಲ್ಲಾಖಾನ್ ನಿಯಾಝಿಯನ್ನು ವಿಚಾರಣೆಗಾಗಿ ದರಬಾರಿಗೆ ಕರೆಯ ಲಾಯಿತು. ಅವರು ಇಸ್ಲಾಮಿ ಶಿಷ್ಟಾಚಾರವನ್ನು ಪಾಲಿಸುತ್ತಾ ತಲೆ ತಗ್ಗಿಸದೆ ಸಲಾಮ್ ಹೇಳಿದರು. ಆದರೆ ಫಿರ್‌ಔನನಂತಿದ್ದ ರಾಜನಿಗೆ ಹಿಡಿಸಲಿಲ್ಲ. ಆಸ್ಥಾನಿಕರು ಬಲಾತ್ಕಾರ ದಿಂದ ಅಬ್ದುಲ್ಲಾಖಾನ್ ನಿಯಾಝಿಯವರ ತಲೆತಗ್ಗಿಸಿ, "ರಾಜರಿಗೆ ಸಲಾಮ್ ಈ ರೀತಿ ಮಾಡಲಾಗುತ್ತದೆ" ಎಂದರು. ಅದಕ್ಕುತ್ತರವಾಗಿ ನಿಯಾಝಿಯವರು, "ಸಲಾಮ್ ಮಾಡುವ ಇಸ್ಲಾಮಿ ಶಿಷ್ಟಾಚಾರ ಇದಾಗಿದೆ. ಪ್ರವಾದಿಯವರಿಗೆ(ಸ) ಸಹಾಬಿಗಳು ಹೀಗೆಯೇ ಸಲಾಮ್ ಮಾಡುತ್ತಿದ್ದರು. ಸಲಾಮ್ ಮಾಡುವ ಬೇರಾವ ರೀತಿಯೂ ನನಗೆ ತಿಳಿದಿಲ್ಲ" ಎಂದರು.

ದೇವಭಯವಿದ್ದಿದ್ದರೆ ರಾಜನು ಈ ಮಾತಿನಿಂದ ತನ್ನನ್ನು ತಿದ್ದುತ್ತಿದ್ದನು. ಆದರೆ ಮಕ್‌ದೂಮ್ ಮಲಿಕನು ಸಲೀಮ್‌ಸೂರಿಯನ್ನು ಪ್ರೇರೇಪಿಸಿ ಇನ್ನಷ್ಟು ಕಿರುಕುಳ ಕೊಡಲಾರಂಭಿಸಿದನು. ಕೊನೆಗೆ ಅಬ್ದುಲ್ಲಾಖಾನ್ ನಿಯಾಝಿಯವರು ಅಲ್ಲಿಂದ ವಲಸೆ ಹೋಗಲು ತೀರ್ಮಾನಿಸಿದರು. ಕೊನೆಯ ಗಳಿಗೆಯ ವರೆಗೂ ಅವರು ತಮ್ಮ ಸುಧಾರಣಾ ಚಟುವಟಿಕೆಯನ್ನು ಜಾರಿಯಲ್ಲಿರಿಸಿದರು. ಕಾಶ್ಮೀರದಲ್ಲಿರುವಾಗ ಅವರಿಗೆ, ಸಯ್ಯಿದ್ ಮುಹಮ್ಮದ್ ಜೋನ್‌ಪುರಿಯ ನಿಧನದ ವೇಳೆ ಜೊತೆಗಿದ್ದ ಮೊಗಲ ವ್ಯಕ್ತಿಯೊಂದಿಗೆ ಭೇಟಿಯಾಯಿತು. ಅವರೊಂದಿಗಿನ ಚರ್ಚೆಯ ನಂತರ ಅಬ್ದುಲ್ಲಾಖಾನ್ ನಿಯಾಝಿಯವರು ಮೆಹ್ದವಿ ವಾದವನ್ನು ಸಮರ್ಥಿಸಲಿಲ್ಲ.

## ಶೈಖ್ ಅಲಾಯಿಯವರ ಹುತಾತ್ಮತೆ

ಅಬ್ದುಲ್ಲಾ ಖಾನ್ ನಿಯಾಝಿಗೆ ಇಷ್ಟೆಲ್ಲ ಕಿರುಕುಳ ಕೊಟ್ಟ ಬಳಿಕವೂ ಮಕ್‌ದೂಮ್ ಮಲಿಕನ ದ್ವೇಷದ ಅಗ್ನಿಜ್ವಾಲೆಯು ನಂದಿರಲಿಲ್ಲ. ಆ ಅಕ್ರಮಿಯು ಶೈಖ್ ಅಲಾಯಿಯ ಹಿಂದೆ ಬಿದ್ದನು. ರಾಜ ಸಲೀಮ್‌ಷಾ ಸೂರಿಯ ಮುಖಾಂತರ ಶೈಖ್ ಅಲಾಯಿಯನ್ನು ದರಬಾರಿಗೆ ಕರೆಸಿದನು. ಶೈಖ್ ಅಲಾಯಿಯು ದರಬಾರಿನ ವೈಭವಕ್ಕೆ ಮಾರುಹೋಗಲೂ ಇಲ್ಲ, ರಾಜನಿಗೆ ವಿಶೇಷ ಗೌರವವನ್ನು ಸಲ್ಲಿಸಲೂ ಇಲ್ಲ. ರಾಜನು ತನ್ನ ವಿಶೇಷ ಆಹಾರವನ್ನು ಶೈಖ್‌ರ ಮುಂದಿಟ್ಟಾಗ, ಶೈಖರು ಆಕ್ಷೇಪಿಸಿದರು. ಆದರೆ ರಾಜನಿಗೆ ಇದು ಹಿಡಿಸಲಿಲ್ಲ. ರಾಜನಿಗೆ ಅವರ ದೇವಭಯ ಮತ್ತು ಪ್ರಾಮಾಣಿಕತೆ ತಿಳಿದಿದ್ದ ಕಾರಣ ಸುಮ್ಮನಾದನು. ನಂತರ ಶೈಖ್‌ಗೆ ಆಸ್ಥಾನದಲ್ಲಿ ಭಾಷಣದ ವ್ಯವಸ್ಥೆ ಕಲ್ಪಿಸಲಾಯಿತು. ಅಲ್ಲಾಹನು ಅವರಿಗೆ ಹೃದಯ ಸಂವೇದಿ ಮಾತುಕತೆಯ ಸಾಮರ್ಥ್ಯ ದಯಪಾಲಿಸಿದ್ದನು. ಅವರು ಭಾಷಣ ಮಾಡುತ್ತಾ ಪರಲೋಕದ ಚಿತ್ರಣವನ್ನು ಜನರ ಮುಂದಿರಿಸಿದರು. ಆಸ್ಥಾನಿಕರಿಗೆ ಮರಣಾನಂತರ ಜೀವನದ ಭಯ ವುಂಟಾಯಿತು. ರಾಜ ಸಲೀಮ್ ಸೂರಿಯೂ ಭಾರೀ ಪ್ರಭಾವಕ್ಕೊಳಗಾದನು. ಆದರೆ ಮಕ್‌ದೂಮ್ ಮಲಿಕನಿಗೆ ಇದನ್ನು ಸಹಿಸಲಾಗಲಿಲ್ಲ. ಅವನು 'ಮೆಹ್ದಿ' ವಿಶ್ವಾಸವನ್ನು ಚರ್ಚೆಗೆ ತಂದು ಅವರನ್ನು ವಧಿಸಲು ತೀರ್ಮಾನಿಸುತ್ತಾನೆ. ರಾಜನು ಇಕ್ಕಟ್ಟಿಗೆ ಸಿಲುಕಿ ಸಮಸ್ಯೆಯ ಪರಿಹಾರಕ್ಕೆ ವಿದ್ವಾಂಸರ ಒಂದು ಸಮಿತಿಯನ್ನು ರಚಿಸಿದನು. ಆ ಸಮಿತಿಯ ಸದಸ್ಯರು ಅನೇಕ ದಿನಗಳ ವರೆಗೆ ಚರ್ಚೆ ನಡೆಸಿದರೂ ಒಂದು ಒಮ್ಮತದ ನಿಲುವು ಸ್ವೀಕರಿಸಲು ಅವರಿಂದಾಗಲಿಲ್ಲ. ಆದ್ದರಿಂದ ರಾಜನು ಅವರನ್ನು ವಧಿಸಲು ಮುಂದಾಗಲಿಲ್ಲ. ಆದರೆ ಮಕ್‌ದೂಮ್ ಮಲಿಕನಿಂದ ನಿರ್ಬಂಧಿತನಾಗಿ ಶೈಖ್‌ರನ್ನು ದಕ್ಷಿಣದ ಕಡೆಗೆ ರವಾನಿಸಿದನು. ಈ ಸಂದರ್ಭದಲ್ಲಿ ಶೈಖ್‌ರ ಕುರಿತು ಭಾರೀ ಚರ್ಚೆಯಾಯಿತು. ದಾರಿಯಲ್ಲಿ ಅನೇಕರು ಅವರ ಅನುಯಾಯಿಯಾದರು. ಮಕ್‌ದೂಮ್ ಮಲಿಕನು ಮತ್ತೆ ಸಲೀಮ್ ಸೂರಿಯನ್ನು ಒತ್ತಾಯಿಸಿ ಶೈಖ್‌ರನ್ನು ಆಸ್ಥಾನಕ್ಕೆ ಕರೆಸಿದನು. ಈ ಸಲ ಶೈಖ್‌ರ ವಿಶ್ವಾಸದ ಪರೀಕ್ಷೆಯನ್ನು ಬಿಹಾರದ ಉನ್ನತ ವಿದ್ವಾಂಸರಾಗಿದ್ದ ಮಿಯಾಂಬಟೆ ಎಂಬವರಿಗೆ ವಹಿಸ ಲಾಗಿತ್ತು. ಆ ವಿದ್ವಾಂಸ ಸಲೀಮ್ ಸೂರಿಗೆ ಒಂದು ಪತ್ರ ಬರೆದು, "ಸಮಸ್ಯೆಯು ಅವರ ವಿಶ್ವಾಸದಲ್ಲಲ್ಲ, ಮೆಹ್ದಿಯ ವಿಷಯದಲ್ಲಿರುವ ಭಿನ್ನಾಭಿಪ್ರಾಯವೇ ಸಮಸ್ಯೆಯಾಗಿದೆ. ಆದುದರಿಂದ ಅವರನ್ನು ಸತ್ಯವಿಶ್ವಾಸಿ ಅಥವಾ ಸತ್ಯನಿಷೇಧಿಯೆಂದು ತೀರ್ಮಾನಿಸಲಾಗದು." ಆದರೆ ಈ ಪತ್ರವನ್ನು ಅವರ ಮಕ್ಕಳು ರಾಜನಿಗೆ ತಲುಪಿಸದೆ ಬೇರೆ ಪತ್ರವೊಂದನ್ನು ತಲುಪಿಸಿದರು. ಅದರಲ್ಲಿ ಹೀಗೆ ಬರೆಯಲಾಗಿತ್ತು: "ಮಕ್‌ದೂಮ್ ಮಲಿಕರು ಸತ್ಪಥದಲ್ಲಿ ದ್ದಾರೆ. ಅವರು ನೀಡುವ ತೀರ್ಪೇ ಸರಿಯಾಗಿದೆ." ರಾಜನು ನಿರ್ಬಂಧಿತನಾಗಿ ಶೈಖ್‌ರನ್ನು ಮಕ್‌ದೂಮ್ ಮಲಿಕನಿಗೆ ಒಪ್ಪಿಸಿದನು. ಮಕ್‌ದೂಮ್ ಮಲಿಕನು ಶೈಖ್‌ರನ್ನು ವಧಿಸಿ, ಅವರ ಮೃತ ಶರೀರವನ್ನು ಆನೆಯ ಹಿಂಬದಿಗೆ ಕಟ್ಟಿ ನಗರವಿಡೀ ಮೆರವಣಿಗೆ ನಡೆಸಿದನು.

ಈ ಮಹಾನರಂತೆ ಇತರ ಅನೇಕರು ಇಂತಹ ಅಕ್ರಮಿಗಳಿಂದ ದ್ರೋಹಕ್ಕೊಳಗಾದರು. ಮೆಲ್ಲಮೆಲ್ಲನೆ ಈ ಆಂದೋಲನ ನಶಿಸತೊಡಗಿತು. ಮೆಹ್ದಿ ವಿಶ್ವಾಸದ ಜನರು ಇಂದಿಗೂ ಗುಜರಾತ್ ಮತ್ತು ದಕ್ಷಿಣ ಪ್ರದೇಶಗಳಲ್ಲಿ ಕಂಡು ಬರುತ್ತಾರೆ. ಆದರೆ ಮೆಹ್ದಿ ವಿಶ್ವಾಸದ ಅತಿರೇಕದಿಂದ ಅವರು ಒಂದು ಪ್ರತ್ಯೇಕ ಜನಾಂಗವಾಗಿದ್ದಾರೆ ಮತ್ತು ಆಂದೋಲನದ ನೈಜ ಸ್ಫೂರ್ತಿ ಅಳಿದು ಹೋಗಿದೆ.

## ಪ್ರಶ್ನೆಗಳು

1. 'ಮೆಹ್ದವಿ' ಆಂದೋಲನ ಏನಾಗಿತ್ತು? ಅದರ ಸ್ಥಾಪಕನಾರು? ಈ ಆಂದೋಲನ ಯಾವ ಅವಸ್ಥೆಯಲ್ಲಿ ಹುಟ್ಟಿತು?
2. ಸಯ್ಯದ್ ಮುಹಮ್ಮದ್ ಜೋನ್‌ಪುರಿಯು ಮೆಹ್ದವಿ ಆಂದೋಲನ ಹುಟ್ಟುಹಾಕುವುದಕ್ಕೆ ಮೊದಲು ವಿದ್ವಾಂಸರ ಮತ್ತು ನಾಯಕರ ಅವಸ್ಥೆಯೇನಾಗಿತ್ತು? ಜನಸಾಮಾನ್ಯರು ಹೇಗಿದ್ದರು?
3. ಸೈಯದ್ ಮುಹಮ್ಮದ್ ಜೋನ್‌ಪುರಿಯ ಪಾಂಡಿತ್ಯದ ಕುರಿತು ನೀವೇನು ತಿಳಿದಿದ್ದೀರಿ? ಸರದಾರನಾಗಿದ್ದ ಹುಸೈನರೊಂದಿಗೆ ಅವರು ಹೇಗೆ ಸಹಕರಿಸಿದರು?
4. ಅವರ ಯಾವ ತಪ್ಪಿನಿಂದಾಗಿ ಜನರು ಅವರ ವಿರುದ್ಧ ಕ್ಷೋಭೆ ಹುಟ್ಟಿಸಿದರು?
5. ಅವರು ಮತ್ತು ಅವರ ಆಂದೋಲನವನ್ನು ಹೇಗೆ ಆಕ್ಷೇಪಿಸಲಾಗುತ್ತಿತ್ತು?
6. ಗುಜರಾತ್‌ನಲ್ಲಿ ಯಾವ ಘಟನೆ ನಡೆಯಿತು?
7. ಅವರು ಕಂದಹಾರ್‌ಗೆ ಏಕೆ ಪಯಣಿಸಿದರು? ಅಲ್ಲಿನ ಜನರು ಅವರೊಂದಿಗೆ ಹೇಗೆ ವರ್ತಿಸಿದರು?
8. ಫರಾದಲ್ಲಿ ಅವರ ವಿರುದ್ಧ ಹೇಗೆ ವರ್ತಿಸಲಾಯಿತು? ಅದರ ಪರಿಣಾಮವೇನು?
9. ಅವರ ಕೊನೆಯ ದಿನಗಳ ಕುರಿತು ನೀವೇನು ಬಲ್ಲಿರಿ?
10. ಅವರ ನಂತರ ಮೆಹ್ದವಿ ಆಂದೋಲನದ ಅವಸ್ಥೆಯೇನಾಯಿತು?
11. ಶೈಖ್ ಅಲಾಯಿಯವರ ಕುರಿತು ನೀವೇನು ತಿಳಿದಿದ್ದೀರಿ? ಅವರು ಹೇಗೆ ಹುತಾತ್ಮರಾದರು?
12. ಅಬ್ದುಲ್ಲಾಖಾನ್ ನಿಯಾಝಿಯವರ ಮೇಲೇಕೆ ಕ್ರೋಧವುಂಟಾಯಿತು?
13. ಈ ಆಂದೋಲನದಿಂದ ಯಾವ ಪ್ರಯೋಜನ ಲಭಿಸಿದುವು? ನಂತರ ಈ ಆಂದೋಲನ ಏಕೆ ಕೊನೆಯುಸಿರೆಳೆಯಿತು?
14. ಇಂದು ಆಂದೋಲನದ ವಾಹಕರು ಎಲ್ಲಿ ಕಂಡು ಬರುತ್ತಾರೆ? ಅವರ ಇಂದಿನ ಸ್ಥಿತಿಯೇನು?
15. ಈ ಆಂದೋಲನದಲ್ಲಿ ಮುಂಚೂಣಿಯಲ್ಲಿದ್ದವನಾರು? ಅವರು ಹೇಗೆ ನಷ್ಟ ಉಂಟು ಮಾಡಿದರು?